# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಫೆಬ್ರವರಿ ೧೬, ೨೦೧೨ (ಮಾಘ ೨೭, ಶಕ ವರ್ಷ ೧೯೩೩) | ಸಂಚಿಕೆ ೭ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:02/06–07 ದಿನಾಂಕ:17–09–2011**

| | | |
|---|---|---|
| **ಉಪಸ್ಥಿತರು** | : | ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ<br>(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | : | ಶ್ರೀ ಶಿವಕುಮಾರ್ ಎಸ್. ಬಿನ್ ಮಂಜುನಾಥ, ಮನೆ ನಂ:2/52, ಪೇಪರ್ ಟೌನ್ ಭದ್ರಾವತಿ,<br>(ಶ್ರೀ ಬಿ.ತೇಜಪ್ಪ, ವಕೀಲರು, ಶಿವಮೊಗ್ಗ) |

**ಪ್ರಸ್ತಾವನೆ:–**

ದಿ:09–04–2006 ರಂದು ಒಂದು ವಾಹನದಲ್ಲಿ ಸಾಗುವಾನಿ ನಾಟಾ ಅಕ್ರಮ ಸಾಗಾಣಿಕೆ ಮಾಡಿದ ಬಗ್ಗೆ ಆನಂದಪುರಂ ವಲಯ, ಚೋರಡಿಯ ತುಪ್ಪೂರು ಶಾಖೆ ವನಪಾಲಕರು ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:09–04–2006 ರಂದು ಆನಂದಪುರಂ ವಲಯ, ಚೋರಡಿಯ ತುಪ್ಪೂರು ಶಾಖೆ ವನಪಾಲಕರಿಗೆ ದೂರವಾಣಿ ಮೂಲಕ ಬಂದ ಖಚಿತ ವರ್ತಮಾನದಂತೆ ಶಿವಮೊಗ್ಗ ತಾ. ಕುಂಸಿ ಹೋಬಳಿ, ಕೋಣೆಹೊಸೂರು ಗ್ರಾಮದ ಸ.ನಂ. 47ರ ಸಾಗುವಾನಿ ನೆಡುತೋಪಿನಲ್ಲಿ ಎಸ್.ಶಿವಕುಮಾರ್ ಮತ್ತು ಚಾಲಕ ಮಂಜೇಗೌಡ, ಭದ್ರಾವತಿ ಪೇಪರ್‌ಟೌನ್, ಇವರು ಎರಡು ದಿನಗಳ ಹಿಂದೆ ಸಾಗುವಾನಿ ಮರಗಳನ್ನು ಕಡಿತಲೆ ಮಾಡಿದ್ದಾರೆ ಎಂದು ತಿಳಿಸಿದ ಮೇರೆಗೆ ಇವರು ಸಿಬ್ಬಂದಿಯೊಡನೆ ಸದರಿ ಸ್ಥಳ ಪರಿಶೀಲಿಸಲಾಗಿ 08 ಸಾಗುವಾನಿ ಮರಗಳನ್ನು ಕಡಿತಲೆ ಮಾಡಿ, ವಾಹನದಲ್ಲಿ ಸಾಗಾಣಿಕೆ ಆದ ಬಗ್ಗೆ ಕುರುಹುಗಳು ಕಂಡಿರುತ್ತದೆ. ಸ್ಥಳದಲ್ಲಿ ಸಾಗುವಾನಿ ನಾಟಾ 10=0.811 ಎಂ3 ತುಂಡುಗಳು ಬೀಟೆ ನಾಟಾ 02=0.156 ಎಂ3 ತುಂಡುಗಳಿದ್ದು, ಇವುಗಳ ಒಟ್ಟು ಅಳತೆ 12=0.967 ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಮತ್ತು ಸದರಿ ಸ್ಥಳದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಭದ್ರಾವತಿ ಶಾಖೆಯ ಎ.ಟಿ.ಎಂ. ನಿಂದ ಹಣ ಡ್ರಾ ಮಾಡಿದ ರಸೀದಿ ಸಂಖ್ಯೆ: 00064000599776 ದೊರೆತಿದ್ದು, ದೂರವಾಣಿಯಲ್ಲಿ ತಿಳಿಸಿದಂತೆ (1)ಶಿವಕುಮಾರ್ ಎಸ್. (2)ಮಂಜೇಗೌಡರನ್ನು ಆರೋಪಿಗಳನ್ನಾಗಿ ಮಾಡಿ, ನಾಟಾಗಳನ್ನು ಇಲಾಖಾ ಪರ ಜಪ್ತು ಪಡಿಸಿ, ಪ್ರಥಮ ವರ್ತಮಾನ ವರದಿ, ಜಪ್ತು ವರದಿ ಹಾಗೂ ಮಹಜರ್ ವರದಿಯನ್ನು ತಯಾರಿಸಿ, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 34, 24(ಎ), 62, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅ.ಮೊ. ಸಂಖ್ಯೆ:02/06–07ನ್ನು ದಾಖಲಿಸಿ, ಜಪ್ತಾದ ಅರಣ್ಯ ಉತ್ಪನ್ನವನ್ನು ದಾಖಲೆಗಳೊಂದಿಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರಿಗೆ ಸಲ್ಲಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿಯವರು ಸ್ಥಳದಲ್ಲಿ ಸಿಕ್ಕ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಭದ್ರಾವತಿ ಶಾಖೆಯ ಎ.ಟಿ.ಎಂ. ನಿಂದ ಹಣ ಪಡೆದ ರಸೀದಿಯ ಆಧಾರದ ಮೇಲೆ ಸದರಿ ಬ್ಯಾಂಕ್‌ಗೆ ಹೋಗಿ ಬ್ಯಾಂಕ್ ಅಧಿಕಾರಿಯನ್ನು ವಿಚಾರಿಸಿದಾಗ, ಈ ರಸೀದಿ ಎಸ್.ಶಿವಕುಮಾರ್ ಬಿನ್ ಮಂಜುನಾಥ್, ಮನೆ ನಂ:2/52, ಪೇಪರ್ ಟೌನ್, ಭದ್ರಾವತಿ ಎಂದು ತಿಳಿಸಿದರು. ನಂತರ ಈ ಪ್ರಕರಣದಲ್ಲಿ ಆರೋಪಿಗಳಾದ ಎಸ್.ಶಿವಕುಮಾರ್ ಬಿನ್ ಮಂಜುನಾಥ, ಮನೆ ನಂ:2/52, ಪೇಪರ್ ಟೌನ್, ಭದ್ರಾವತಿ ಮತ್ತು ಮಂಜೇಗೌಡ ಬಿನ್ ಲಿಂಗಪ್ಪ, ಉಜ್ಜನಿಪುರ, ಭದ್ರಾವತಿ ರವರನ್ನು ಬಂಧಿಸಿ ವಿಚಾರಣೆ ಮಾಡಿರುತ್ತಾರೆ. ಈ ಪ್ರಕರಣದಲ್ಲಿ 8 ಸಾಗುವಾನಿ ಮರಗಳನ್ನು ಅಕ್ರಮವಾಗಿ ಕಡಿದು ಸಿಕ್ಕದೆ ಬಾಕಿ ಉಳಿದ ನಾಟಾಗಳನ್ನು ಚಿತ್ರದುರ್ಗಕ್ಕೆ ಸಾಗಿಸಲು ಉಪಯೋಗಿಸಿದ ವಾಹನ ಲಾರಿ ನಂ:ಕೆಎ–14–5019ರ ಬಗ್ಗೆ ಬಂಧಿಸಿದ ಆರೋಪಿಗಳು ತಿಳಿಸಿರುತ್ತಾರೆ. ಸದರಿ ಲಾರಿಯು ದಿ:10–04–2006ರಂದು ಎಸ್.ಶಿವಕುಮಾರ್‌ರವರ ಮನೆಯ ಮುಂದೆ ನಿಲ್ಲಿಸಿರುವುದನ್ನು ಅಮಾನತ್ತು ವರದಿ 3ರ ಪ್ರಕಾರ ಇಲಾಖಾ ಪರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತುಪಡಿಸಿರುತ್ತಾರೆ. ಮತ್ತು ದಿ:10–04–2006 ರಂದು ಲೋಕೇಶ್‌ಕುಮಾರ್ ಬಿನ್ ದಿ॥ ಕೆರಿಯಪ್ಪ, ಟೀಚರ್ಸ್ ಕಾಲೋನಿ, ಚಿತ್ರದುರ್ಗ ರವರ ಮನೆಗೆ ಹೋಗಿ ತಪಾಸಣೆ ಮಾಡಲಾಗಿ ಅವರ ವಾಸದ ಮನೆಯ ಶೆಡ್‌ನಲ್ಲಿ ಹಸಿ ಸಾಗುವಾನಿ 22 ನಾಟಾಗಳು ಇರುವುದು ಕಂಡುಬಂದಿತ್ತು. ಸದರಿ ನಾಟಾಗಳ ಅಳತೆ 2.401 ಎಂ3 ಪ್ರಮಾಣವಿದ್ದು, ಇದನ್ನು ಅಮಾನತ್ತು ವರದಿ 2ರ ಪ್ರಕಾರ ಇಲಾಖಾ ಪರ ಜಪ್ತು ಪಡಿಸಲಾಯಿತು. ನಂತರ ಕಛೇರಿಗೆ ಬಂದು ಆರೋಪಿಗಳನ್ನು ಸಾಗರ ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ರವರಿಗೆ ಈ ನ್ಯಾಯಾಲಯದಿಂದ ಪತ್ರ ಸಂ: ಬಿ3:ಅಮೊ:ವಾಹನ:ವಿವ:02/06–07 ದಿ:02–09–2006 ರಂದು ಪತ್ರ ಬರೆದು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಕೋರಲಾಗಿತ್ತು. ಅದರಂತೆ, ಸಾರಿಗೆ ಅಧಿಕಾರಿ, ಶಿವಮೊಗ್ಗ ರವರು ದಿ:04–09–2006ರಲ್ಲಿ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ನಮೂದಿಸಿದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಕಾರಣ ಕೇಳಿ ನೋಟಿಸ್‌ನ್ನು ದಿ:10–07–2006 ರಂದು 30 ದಿನಗಳ ಕಾಲವಕಾಶ ನೀಡಿ ನೊಂದಣಿ ಅಂಚೆ ಮೂಲಕ ಜಾರಿಮಾಡಿದೆ.

ಆರ್.ಸಿ. ಮಾಲೀಕರಾದ ಶ್ರೀ ಶಿವಕುಮಾರ್ ಎಸ್. ಬಿನ್ ಮಂಜುನಾಥ, ಮನೆ ನಂ:02/52, ಪೇಪರ್ ಟೌನ್, ಭದ್ರಾವತಿ ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ದಿ:10–07–2006 ರಂದು ಸಲ್ಲಿಸಿ, ವಾಹನ ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಕೋರಿಕೆಯಂತೆ 7 ಷರತ್ತುಗಳನ್ನು ಆರ್.ಸಿ. ಮಾಲೀಕರಿಗೆ ವಿಧಿಸಿ, ಸಾರಿಗೆ ಅಧಿಕಾರಿ ಈ ವಾಹನದ ಮೌಲ್ಯ ನಿಗಧಿಪಡಿಸಿದ ಹಣಕ್ಕೆ ಭದ್ರತಾ ಠೇವಣಿ / ಬ್ಯಾಂಕ್ ಗ್ಯಾರಂಟಿ ಮತ್ತು ಅಷ್ಟೇ ಮೊತ್ತಕ್ಕೆ 2 ಶ್ಯೂರಿಟಿ ಹಾಗೂ ನಷ್ಟ ಭರ್ತಿ ಬಾಂಡ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಿದ ನಂತರ ಮಾತ್ರ ಖಾಲಿ ವಾಹನ ಮಾಲೀಕರಿಗೆ ಬಿಡಲು ದಿ:15–12–2007 ರಂದು ಆದೇಶವಾಗಿರುತ್ತದೆ. ಈ ಆದೇಶದಂತೆ ಸದರಿ ವಾಹನದ ಮೌಲ್ಯವನ್ನು ಸಾರಿಗೆ ಅಧಿಕಾರಿ, ಸಾಗರ ಇವರ ₹ 50,000/– (ರೂ. ಐವತ್ತು ಸಾವಿರ ಮಾತ್ರ) ವೆಂದು ದಿ:28–03–2008ರ ದೃಢೀಕರಣ ಪತ್ರವನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ ವಾಹನದ ಮೌಲ್ಯಕ್ಕೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ, ಸಾಗರ ಶಾಖೆಯಿಂದ ಭದ್ರತಾ ಠೇವಣಿ FDR No: 967049, dt:14-07-2010 ₹ 25,000/- ಮತ್ತು FDR No.967050 dt:14-07-2010 ₹ 25,000/– ಪಡೆದು ಈ ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ. ಮತ್ತು 2 ಶ್ಯೂರಿಟಿಯನ್ನು (1) ಶ್ರೀ ಮಲ್ಲಪ್ಪ ಬಿನ್ ಸಿದ್ದಪ್ಪ, 30 ವರ್ಷ, ಪೇಪರ್ ಟೌನ್ ವಾಸಿ, ಭದ್ರಾವತಿ ತಾ. ಇವರಿಗೆ ಸೇರಿದ ಕಸಬಾ ಹೋಬಳಿ ಬಾಳೆಮರನಹಳ್ಳಿ ಗ್ರಾಮದ ಸ.ನಂ. 51ರಲ್ಲಿನ 16 ಗುಂಟೆ ತರಿ ಜಮೀನು ಮತ್ತು (2) ಶ್ರೀ ರುದ್ರಪ್ಪ ಬಿನ್ ನವೀಲಪ್ಪ, 45 ವರ್ಷ, ಪೇಪರ್ ಟೌನ್ ವಾಸಿ, ಭದ್ರಾವತಿ ತಾ. ಇವರಿಗೆ ಸೇರಿದ ಕಸಬಾ ಹೋಬಳಿ ಬಾಳೆಮರನಹಳ್ಳಿ ಗ್ರಾಮದ ಸ.ನಂ. 51 ರಲ್ಲಿನ 2.00 ಎಕರೆ 16 ಗುಂಟೆ ತರಿ ಜಮೀನಿನ ಪಹಣಿಯನ್ನು ಈ ನ್ಯಾಯಾಲಯಕ್ಕೆ ಅಫಿಡವಿಟ್ ಮೂಲಕ ದಿ:25–08–2010ರಂದು ಸಲ್ಲಿಸಿರುತ್ತಾರೆ. ಹಾಗೂ ಖಾಲಿ ವಾಹನವನ್ನು ದಿ:17–10–2010 ರಂದು ಆರ್.ಸಿ. ಮಾಲೀಕರು ಪಡೆದಿರುತ್ತಾರೆ.

ಪ್ರಾಸಿಕ್ಯೂಷನ್ ಸಾಕ್ಷಿ (1)ಶ್ರೀ ಎಸ್.ಎಲ್.ರಾಮನಾಯ್ಕ, ವನಪಾಲಕ, ಇವರನ್ನು ದಿ:02–02–2008 ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು 1995 ರಿಂದ ಸೆಪ್ಟೆಂಬರ್ 2006 ರವರೆಗೆ ಚೋರಡಿ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:09–04–2006 ರಂದು ದೂರವಾಣಿ ಮುಖಾಂತರ ಸ.ನಂ. 47 ಕೋಣೆಹೊಸೂರಿನ ಸಾಗುವಾನಿ ನೆಡುತೋಪಿನಲ್ಲಿ ಶಿವಕುಮಾರ್ ಮತ್ತು ಮಂಜೇಗೌಡ ಎಂಬುವವರು ಮರ ಕಡಿದ ಬಗ್ಗೆ ಮಾಹಿತಿ ಬಂದಿತು. ನಾವು ಸ್ಥಳಕ್ಕೆ ಹೋಗಿ ಪರಿಶೀಲಿಸಿದಾಗ 08 ಸಾಗುವಾನಿ ಮರಗಳನ್ನು ಕಡಿದು ಬೀಳಿಸಿರುವುದು ಕಂಡುಬಂದಿತ್ತು. ಸ್ಥಳದಲ್ಲಿ ನೋಡಿದಾಗ 10 ಸಾಗುವಾನಿ ತುಂಡುಗಳು 02 ಬೀಟೆ ತುಂಡುಗಳಿದ್ದು, ಅದನ್ನು ಪರಿಶೀಲಿಸಿದಾಗ ಅವುಗಳ ಮೇಲೆ ಯಾವ ತರಹದ ಇಲಾಖಾ ಛಾಪಾವಿರಲಿಲ್ಲ. ಆ ಸ್ಥಳದಲ್ಲಿ ಒಂದು ಕಾಗದ ಸಿಕ್ಕಿದ್ದು, ಅದು ಭದ್ರಾವತಿ ಎಸ್.ಬಿ.ಎಂ.ನ ಎ.ಟಿ.ಎಂ.ನಲ್ಲಿ ಹಣ ತೆಗೆದ ರಸೀದಿಯಾಗಿತ್ತು. ನಂತರ ತುಂಡುಗಳ ಮೇಲೆ ಇಲಾಖಾ ಛಾಪಾ ಹೊಡೆದು ಮಹಜರ್ ಮಾಡಿ, ಇಲಾಖಾ ವಶಕ್ಕೆ ತೆಗೆದುಕೊಂಡೆವು. ನಂತರ ರಸೀದಿಯನ್ನು ತೆಗೆದುಕೊಂಡು ಹೋಗಿ ಭದ್ರಾವತಿಯಲ್ಲಿ ಸಂಬಂಧಪಟ್ಟ ಎಸ್.ಬಿ.ಎಂ. ಶಾಖೆಯಲ್ಲಿ ವಿಚಾರಿಸಿದಾಗ ಸದರಿ ರಸೀದಿಯು ಶಿವಕುಮಾರ್ ಎಂಬುವವರಿಗೆ ಸಂಬಂಧಿಸಿದ್ದೆಂದು ತಿಳಿಸಿ, ಅವರ ವಿಳಾಸ ನೀಡಿದರು. ಆ ವಿಳಾಸಕ್ಕೆ ನಾವು ಹೋಗಿ ಶಿವಕುಮಾರ್‌ನನ್ನು ಮತ್ತು ಆತನ ಜೊತೆಯಲ್ಲಿದ್ದ ವಾಹನ ಚಾಲಕ ಮಂಜೇಗೌಡ ಎಂಬುವನನ್ನು ಬಂಧಿಸಿ ಚೋರಡಿ ವಲಯ ಕಛೇರಿಗೆ ಕರೆದುಕೊಂಡು ಬಂದು ವಿಚಾರಣೆ ಮಾಡಿದಾಗ ಅವರು ಸಾಗುವಾನಿ ತುಂಡುಗಳನ್ನು ಚಿತ್ರದುರ್ಗದಲ್ಲಿರುವ ಇಂಜಿನಿಯರ್ ಶ್ರೀ ಲೋಕೇಶ್‌ಕುಮಾರ್ ಎಂಬುವವರ

ಮನೆಯಲ್ಲಿಟ್ಟಿರುವುದಾಗಿ ತಿಳಿಸಿದರು. ನಂತರ ಅವರ ಮನೆಗೆ ಹೋಗಿ ನೋಡಿದಾಗ ಅಲ್ಲಿ 22 ಸಾಗುವಾನಿ ತುಂಡುಗಳಿರುವುದು ಕಂಡುಬಂದಿತು. ಅದನ್ನು ಪರಿಶೀಲಿಸಿದಾಗ ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ ಮತ್ತು ರಹದಾರಿಯಾಗಲೀ ಇರುವುದು ಕಂಡುಬಂದಿರುವುದಿಲ್ಲ. ನಂತರ ಶಿವಕುಮಾರ್ ರವರು ಸದರಿ ಸಾಗುವಾನಿ ನಾಟಾವನ್ನು ಚಿತ್ರದುರ್ಗಕ್ಕೆ ಸಾಗಿಸಲು ಉಪಯೋಗಿಸಿದ ಲಾರಿಯನ್ನು ತೋರಿಸಿದರು. ಅದನ್ನು ಸರ್ಕಾರ ಪರ ಮಹಜರ್ ಅಡಿಯಲ್ಲಿ ಅಮಾನತ್ತು ಪಡಿಸಿಕೊಳ್ಳಲಾಯಿತು.

ಆ ದಿನ ನೆಡುತೋಪಿನಲ್ಲಿ ಸಾಗುವಾನಿ ಮತ್ತು ಬೀಟೆ ತುಂಡುಗಳನ್ನು ಅಮಾನತ್ತುಪಡಿಸಿಕೊಂಡ ಮಹಜರ್‌ನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ ಪಿ–1 ಮತ್ತು ನನ್ನ ಸಹಿಯನ್ನು ನಿಪಿ–1ಎ ಎಂದು, ಆ ಬಗ್ಗೆ ಮಾಡಿದ ಪ್ರಥಮ ವರ್ತಮಾನ ವದಿಯನ್ನು ನಿಪಿ–2 ಎಂದು, ಅದರಲ್ಲಿರುವ ನನ್ನ ಸಹಿಯನ್ನು 2ಎ ಎಂದು, ಜಪ್ತಿ ವರದಿಯನ್ನು ನಿಪಿ–3 ಎಂದು, ನನ್ನ ಸಹಿಯನ್ನು 3ಎ ಎಂದು, ಚಿತ್ರದುರ್ಗದ ಲೋಕೇಶ್ ಕುಮಾರ್ ಎಂಬುವವರ ಮನೆಯ ಶೆಡ್‌ನಲ್ಲಿ ಮಾಡಿದ ಮಹಜರ್‌ನ್ನು ನಿಪಿ–4 ಎಂದು, ನನ್ನ ಸಹಿಯನ್ನು 4ಎ ಎಂದು, ಹಾಗೂ ಭದ್ರಾವತಿಯಲ್ಲಿ ಜಪ್ತು ಮಾಡಿದ ಲಾರಿಯ ಮಹಜರ್‌ನ್ನು ನಿಪಿ–5 ಎಂದು ಗುರುತಿಸಲಾಯಿತು. ಸದರಿ ಲಾರಿಯನ್ನು ಅಕ್ರಮವಾಗಿ ಬೀಟೆ, ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಮಾಡಲು ಉಪಯೋಗಿಸಿರುವುದರಿಂದ ಸದರಿ ವಾಹನ ಮತ್ತು ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಕೋರಿಕೊಳ್ಳುತ್ತೇನೆ."

ಸಾಕ್ಷಿಯನ್ನು ಪುನ: ದಿ:19–09–2009 ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಿ ಪಾಟಿಸವಾಲನ್ನು ಶ್ರೀ ಇ.ಟಿ.ವಕೀಲರು ಮಾಡಿದರು. " ದಿ:09–04–2006 ರಂದು ನನಗೆ ದೂರವಾಣಿ ಮೂಲಕ ವರ್ತಮಾನ ಬಂದಾಗ ನಾನು ಚೋರಡಿ ವಲಯದಲ್ಲಿ ರಾತ್ರಿ ಗಸ್ತು ಕಾರ್ಯ ನಡೆಸುತ್ತಿದ್ದೆ. ದೂರವಾಣಿ ಕರೆ ಬಂದ ತಕ್ಷಣ ಸಿಬ್ಬಂದಿಗಳೊಂದಿಗೆ ಬೈಕಿನಲ್ಲಿ ಸ್ಥಳಕ್ಕೆ ಧಾವಿಸಿದೆವು. ಲೋಕೇಶಪ್ಪ ವನಪಾಲಕ, ರಾಘವೇಂದ್ರ ವನಪಾಲಕ, ಹಾಲಪ್ಪ ಅರಣ್ಯ ರಕ್ಷಕ ಮತ್ತು ನಾನು ಹೋಗಿದ್ದೆವು. ಆ ಸ್ಥಳಕ್ಕೆ ಹೋದಾಗ ಅಲ್ಲಿ ಯಾವುದೇ ವಾಹನವಿರಲಿಲ್ಲ. ಅಲ್ಲಿ ಸಣ್ಣಮಟ್ಟ ತುಂಡುಗಳಿದ್ದವು. ಸ್ಥಳದಲ್ಲಿದ್ದ ಮರಗಳನ್ನು ಅದೇ ದಿನ ರಾತ್ರಿ ಕಡಿಯಲಾಗಿತ್ತು. ಆ ದಿನ ಸ್ಥಳದಲ್ಲಿ ವಶಪಡಿಸಿಕೊಂಡ ಎಸ್.ಬಿ.ಎಂ. ಭದ್ರಾವತಿಯ ರಸೀದಿಯನ್ನು ನಾನು ವಲಯ ಅರಣ್ಯಾಧಿಕಾರಿಗೆ ನೀಡಿರುತ್ತೇನೆ. ಸ್ಥಳದಲ್ಲಿ 10 ಸಾಗುವಾನಿ ಮತ್ತು 2 ಬೀಟೆ ಒಟ್ಟು 12 ತುಂಡುಗಳಿದ್ದವು. ಹೋಗುವಾಗ ನಮ್ಮ ಜೊತೆ ಪಂಚರನ್ನು ಕರೆದುಕೊಂಡು ಹೋಗಿರುವುದಿಲ್ಲ. ಸ್ಥಳದಲ್ಲಿನ ಪಂಚರನು ಕರೆಯಲು ಪ್ರಯತ್ನಿಸಿದ್ದು ಯಾರು ಬಂದಿರುವುದಿಲ್ಲ. ತುಂಡುಗಳನ್ನು ವಶಪಡಿಸಿಕೊಂಡ ಜಾಗದ ಚಕ್ಕುಬಂಧಿಯನ್ನು ಬರೆದಿರುತ್ತೇನೆ. ಆ ದಿನ ಚೆಕ್ಕುಬಂಧಿಯನ್ನು ಮಹಜರ್‌ನಲ್ಲಿ ಬರೆದಿಲ್ಲವೆಂದರೆ ಸರಿಯಲ್ಲ. ಮಹಜರ್ ಕ್ರಮ ಜರುಗಿಸಿ ತುಂಡುಗಳನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿಗೆ ಸಾಗಿಸಿರುತ್ತೇವೆ. ಆ ದಿನ ಶಿವಕುಮಾರ್ ಎಂಬುವವರು ವಾಹನ ತಂದು ಸ್ಥಳದಲ್ಲಿ ನಾಟಾ ತುಂಬಿಸಿಕೊಂಡು ಹೋಗಿರುತ್ತಾರೆಂದು ಹೇಳಿರುವುದು ಸುಳ್ಳು ಎಂದರೆ ಸರಿಯಲ್ಲ. ಆ ದಿನ ಸ್ಥಳದಲ್ಲಿ ಎ.ಟಿ.ಎಂ. ರಸೀದಿ ಸಿಗಲಿಲ್ಲ ಎಂದರೆ ಸರಿಯಲ್ಲ. ಭದ್ರಾವತಿಗೆ ಅಕೇಶಿಯ ಸಾಗಾಣಿಕೆ ಮಾಡಿ ಬಂದ ಖಾಲಿ ವಾಹನವನ್ನು ವಶಪಡಿಸಿಕೊಂಡಿರುತ್ತೇವೆ ಎಂದರೆ ಸರಿಯಲ್ಲ. ಚಿತ್ರದುರ್ಗದ ಲೋಕೇಶ್ ಎನ್ನುವವರ ಮನೆಗೆ ಹೋಗಿ ಸಾಗುವಾನಿ ನಾಟಾ ವಶಪಡಿಸಿಕೊಂಡ ಬಗ್ಗೆ ಮಹಜರ್ ಜರುಗಿಸಿದ ಬಗ್ಗೆ ಸದರಿ ಲೋಕೇಶ್ ರವರನ್ನು ಕರೆದು ವಿಚಾರಿಸಿರುವ ಬಗ್ಗೆ ನನಗೆ ತಿಳಿದಿರುವುದಿಲ್ಲ. ಚಿತ್ರದುರ್ಗಕ್ಕೆ ಹೋಗಿ ಆರೋಪಿಗಳ ಸಮಕ್ಷಮ ಮಹಜರ್ ಬರೆಯದೇ ಕಛೇರಿಯಲ್ಲಿ ಮಹಜರ್ ಬರೆದಿದ್ದೇವೆಂದರೆ ಸರಿಯಲ್ಲ. ಚಿತ್ರದುರ್ಗಕ್ಕೆ ಹೋಗುವ ಮೊದಲು ಸದರಿ ವಾಹನವನ್ನು ನಾವು ಜಪ್ತುಮಾಡಿರುವುದಿಲ್ಲ. ನಂತರ ಜಪ್ತು ಮಾಡಿರುತ್ತೇವೆ. ಚಿತ್ರದುರ್ಗದಲ್ಲಿ ನಾವು ಜಪ್ತು ಮಾಡಿದ ಸಾಗುವಾನಿ ತುಂಡುಗಳಿಗೂ, ಸದರಿ ವಾಹನಕ್ಕೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ. ಚಿತ್ರದುರ್ಗದಲ್ಲಿ ಜಪ್ತು ಮಾಡಿದ ತುಂಡುಗಳನ್ನು ಬಾಡಿಗೆ ಗಾಡಿಯಲ್ಲಿ ತಂದಿರುತ್ತೇವೆ. ಸದರಿ ವಾಹನದ ವಿವರಗಳನ್ನು ಮಹಜರ್‌ನಲ್ಲಿ ಬರೆದಿರುವುದರ ಬಗ್ಗೆ ಗೊತ್ತಿಲ್ಲ. ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಕೇಸು ದಾಖಲಿಸಿದ್ದೇನೆಂದರೆ ಸರಿಯಲ್ಲ. ಆ ದಿವಸ ಶಿವಕುಮಾರ್ ಎಂಬುವವರು ಸ್ಥಳಕ್ಕೆ ಹೋಗಿ ಮರಗಳನ್ನು ಅಕ್ರಮವಾಗಿ ಕಡಿದಿರುತ್ತಾರೆಂದು ಸುಳ್ಳು ಮಾಹಿತಿ ಬಂದಿದೆ ಎಂದರೆ ಸರಿಯಲ್ಲ".

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಬಿ.ಮುಕುಂದಚಂದ್ರ, ವಲಯ ಅರಣ್ಯಾಧಿಕಾರಿ, ರವರನ್ನು ದಿ:16–07–2011 ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯಪ್ರತಿಜ್ಞೆ ಬೋಧಿಸಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ " ಜುಲೈ 2005 ರಿಂದ 2008 ನವೆಂಬರ್‌ರವರೆಗೆ ಚೋರಡಿ ವಲಯದಲ್ಲಿ ವಲಯ ಅರಣ್ಯಾಧಿಕಾರಿಯಾಗಿ ಕಾರ್ಯನಿರ್ವಹಿಸಿರುತ್ತೇನೆ. ದಿ:09–04–2006ರಂದು ಈ ಪ್ರಕರಣದ ಮುಂದಿನ ತನಿಖೆಯನ್ನು ರಾಮನಾಯ್ಕ, ವನಪಾಲಕ ಇವರಿಂದ ಪಡೆದು ಪರಿಶೀಲಿಸಿ, ಪ್ರಕರಣದಲ್ಲಿದ್ದ ಶಿವಕುಮಾರ ಬಗ್ಗೆ ವಿಚಾರಿಸಲು ಅವನ ಮನೆಗೆ ಹೋಗಿ ಅವನನ್ನು ಬಂಧಿಸಿ ವಿಷಯ ತಿಳಿಸಿ, ವಿಚಾರಣೆ ಮಾಡಿ ಚಾಲಕನಾದ ಮಂಜೇಗೌಡನ ಬಗ್ಗೆ ಮಾಹಿತಿ ಪಡೆದು, ಉಜ್ಜಿನಿಪುರಕ್ಕೆ ಹೋಗಿ ಅವನ ಮನೆಯನ್ನು ಶಿವಕುಮಾರ್ ತೋರಿಸಿ, ವ್ಯಕ್ತಿಯನ್ನು ಗುರುತಿಸಿದ್ದು ಆತನನ್ನು ವಶಕ್ಕೆ ಪಡೆದು ಹೆಚ್ಚಿನ ವಿಚಾರಣೆಗೆ ಕಛೇರಿಗೆ ಕರೆತಂದೆವು. ಶಿವಕುಮಾರನನ್ನು ಆತನ ಬಳಿ ವಶಕ್ಕೆ ಪಡೆದಾಗ ಮಹಜರ್ ಮಾಡಿದ್ದು ಸದರಿ ಮಹಜರ್ ಈಗ ನೋಡುತ್ತಿದ್ದು, ಅದನ್ನು ನಿಪಿ–5 ಎಂದು ಗುರುತಿಸಲಾಯ್ತು. ಶಿವಕುಮಾರ್ ಮತ್ತು ಮಂಜೇಗೌಡ ಇವರು ತಮ್ಮ ಸ್ವಇಚ್ಚಾ ಹೇಳಿಕೆಯಲ್ಲಿ ಸಾಗುವಾನಿ ತುಂಡುಗಳನ್ನು ಚಿತ್ರದುರ್ಗದಲ್ಲಿ ಇಟ್ಟಿದ್ದು, ತೋರಿಸುವುದಾಗಿ ಹೇಳಿ ನಮ್ಮನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಹೋಗಿ ಟೀಚರ್ಸ್ ಕಾಲೋನಿಯ ಲೋಕೇಶ್ ಎಂಬುವವರ ಮನೆಯಲ್ಲಿದ್ದ 22 ಸಾಗುವಾನಿ ತುಂಡುಗಳನ್ನು ತೋರಿಸಿ, ಗುರುತಿಸಿದ್ದು, ಅವುಗಳು ಹಸಿ ತುಂಡುಗಳಾಗಿದ್ದು ಅವುಗಳ ಅಳತೆ ಕೋಣೆ ಹೊಸೂರಿನಲ್ಲಿ ಕಡಿತಲೆಯಾದ ಮರಗಳ ಬುಡಕ್ಕೆ ತಾಳೆಯಾಗುತ್ತಿದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಸಹ ಇರಲಿಲ್ಲ. ಅವುಗಳನ್ನು ಪಂಚರ ಸಮಕ್ಷಮ ಮಹಜರ್ ಮಾಡಿ ಅಮಾನತ್ತುಪಡಿಸಿಕೊಂಡಿರುತ್ತೇವೆ. ಸದರಿ ಮಹಜರ್ ನಿಪಿ–4 ಎಂದು ಈಗಾಗಲೇ ಗುರುತಿಸಿದ್ದು ಅದರಲ್ಲಿ 4ಬಿ ನನ್ನ ಸಹಿ ಇದೆ. ಲೋಕೇಶ್ ಇವರನ್ನು ವಿಚಾರಣೆ ಮಾಡಿದಾಗ ದಿ:07–04–2006 ರಂದು ಭಾಷಾ ಎಂಬುವವರು ನಾಟಾ ತುಂಡುಗಳನ್ನು ಕಳುಹಿಸಿರುವುದಾಗಿ ತಿಳಿಸಿದರು. ಕಛೇರಿಗೆ ಮಾಲಿನೊಂದಿಗೆ ವಾಪಸ್ಸಾದೆವು. ಸ್ಥಳದಲ್ಲಿ ಸಿಕ್ಕ ಎ.ಟಿ.ಎಂ. ಸ್ಲಿಪ್ ಬಗ್ಗೆ ಎಸ್.ಬಿ.ಎಂ. ಭದ್ರಾವತಿ ಶಾಖೆಗೆ ವಿಚಾರಿಸಿ ವಿವರಗಳನ್ನು ಪಡೆದು ನಂತರ ಶಿವಕುಮಾರ್ ಮನೆಯ ಬಳಿ ಹೋಗಿ ವಿಚಾರಿಸಿದಾಗ ಅವರು ಸದರಿ ಸಾಗುವಾನಿ ನಾಟಾಗಳನ್ನು ಕೆಎ–14–5019ರಲ್ಲಿ ಸಾಗಿಸಿರುವುದಾಗಿ ತಿಳಿಸಿದನು. ನಂತರ ವಾಹನವನ್ನು ನಾವುಗಳು ಪಂಚರ ಸಮಕ್ಷಮ

ಭದ್ರಾವತಿಯ ಶಿವಕುಮಾರ್ ಮನೆ ಬಳಿ ಅಮಾನತ್ತುಪಡಿಸಿಕೊಂಡು ಮಹಜರ್ ತಯಾರಿಸಿದ್ದು, ಅದನ್ನು ನಿಪಿ5 ಎಂದು ಈಗಾಗಲೇ ಗುರುತಿಸಿದ್ದು ಅದರಲ್ಲಿಯ ನನ್ನ ಸಹಿ ನಿಪಿ 5ಎ ಎಂದು ಗುರುತಿಸಿದೆ. ಎ.ಟಿ.ಎಂ. ಸ್ಲಿಪ್ ಮತ್ತು ಎಸ್.ಬಿ.ಎಂ. ಮ್ಯಾನೇಜರ್ ಪತ್ರ ಈಗ ನೋಡುತ್ತಿದ್ದು, ಅವುಗಳನ್ನು ನಿಪಿ6 ಮತ್ತು ನಿಪಿ7 ಎಂದು ಗುರುತಿಸಲಾಯ್ತು. ನಂತರ ಆರೋಪಿಗಳನ್ನು ರಿಮ್ಯಾಂಡ್ ಅರ್ಜಿಯೊಂದಿಗೆ ನ್ಯಾಯಾಲಯಕ್ಕೆ ಹಾಜರುಪಡಿಸಲಾಯ್ತು. ದಿ:03–05–2006ರಂದು ಎಸ್.ಬಿ.ಎಂ. ಭದ್ರಾವತಿ ಶಾಖೆಯ ಮ್ಯಾನೇಜರ್ ಸದರಿ ಎ.ಟಿ.ಎಂ. ಸ್ಲಿಪ್ ಶಿವಕುಮಾರ್ ಎಂಬುವವರಿಗೆ ಸಂಬಂಧಿಸಿದ್ದೆಂದು ಅವರ ಖಾತೆಯು ಪೇಪರ್ ಟೌನ್ ಶಾಖೆಯಲ್ಲಿರುವುದಾಗಿ ತಿಳಿಸಿದರು. ಮರದ ದೃಢೀಕರಣ ಪತ್ರವನ್ನು ಪಡೆದು ವಿಚಾರಣಾ ವರದಿ ಪಡೆದು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿ ಪಡೆದು ನ್ಯಾಯಾಲಯಕ್ಕೆ ಛಾರ್ಜ್ ಶೀಟ್ ಸಲ್ಲಿಸಲಾಯ್ತು. ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ".

ಡಿಫೆನ್ಸ್ ವಕೀಲರು ಗೈರು ಹಾಜರಾಗಿದ್ದ ಕಾರಣ ಪಾಟಿಸವಾಲ್ ಇಲ್ಲವೆಂದು ಪರಿಗಣಿಸಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:23–07–2011, 30–07–2011, 06–08–2011 ರಂದು ಮತ್ತು ವಾದ ಮಂಡಿಸಲು ದಿ:20–08–2011, 27–08–2011 ರಂದು ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಆದ್ದರಿಂದ ಮುಂದಿನ ಕ್ರಮಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:27–08–2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಲಾರಿ ಕೆಎ–14–5019 ರಲ್ಲಿ ಅರಣ್ಯ ಉತ್ಪನ್ನವಾದ 32 ಸಾಗುವಾನಿ ನಾಟಾ 3.212ಎಂ3, 02 ಬೀಟೆ ನಾಟಾ 0.156ಎಂ3ನ್ನು ದಿ:09–04–2006ರಂದು ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ, ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:09–04–2006 ರಂದು ಶಿವಮೊಗ್ಗ ತಾ॥ ಕುಂಸಿ ಹೋಬಳಿ ಕೋಣೆಹೊಸೂರು ಗ್ರಾಮದ ಸ.ನಂ. 47 ರಲ್ಲಿ 08 ಸಾಗುವಾನಿ ಮರಗಳನ್ನು ಅಕ್ರಮವಾಗಿ ಕಡಿದು ಅದನ್ನು ಭದ್ರಾವತಿಯ ಪೇಪರ್ ಟೌನ್ ವಾಸಿ ಎಸ್.ಶಿವಕುಮಾರ್ ಮತ್ತು ಚಾಲಕ ಮಂಜೇಗೌಡ, ಇಬ್ಬರು ಸೇರಿ ಲಾರಿ ನಂ:ಕೆಎ–14–5019ರಲ್ಲಿ ಚಿತ್ರದುರ್ಗಕ್ಕೆ ಅಕ್ರಮವಾಗಿ ಸಾಗಿಸಿದ ಬಗ್ಗೆ ಆನಂದಪುರಂ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ಸೇರಿ ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಶಿವಕುಮಾರ್ ಎಸ್. ಬಿನ್ ಮಂಜುನಾಥ, ಮನೆ ನಂ:2/52, ಪೇಪರ್ ಟೌನ್ ಭದ್ರಾವತಿ ತಾ॥, ಇವರು ದಿ:10–07–2006 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:10–07–2006 ರಂದು ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಮೂರು ಬಾರಿ ದಿನಾಂಕಗಳನ್ನು ನೀಡಲಾಗಿದ್ದು. ಮತ್ತು ಡಿಫೆನ್ಸ್ ವಾದ ಮಂಡಿಸಲು ಎರಡು ಬಾರಿ ದಿನಾಂಕವನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:09–04–2006 ರಂದು ಲಾರಿ ಕೆಎ–14–5019ರಲ್ಲಿ 22 ಸಾಗುವಾನಿ ನಾಟಾ 2.401 ಎಂ3ನ್ನು ಅಕ್ರಮವಾಗಿ ಚಿತ್ರದುರ್ಗಕ್ಕೆ ಸಾಗಿಸಿದ ಬಗ್ಗೆ ಮತ್ತು ಅದನ್ನು ಕೋಣೆಹೊಸೂರು ಸ.ನಂ. 47 ರಲ್ಲಿ ಸಾಗುವಾನಿ ನೆಡುತೋಪಿನಿಂದ ಅಕ್ರಮವಾಗಿ ಕಡಿದ ಬಗ್ಗೆ ಆನಂದಪುರಂ ವಲಯ, ಚೋರಡಿ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಮತ್ತು ಈ ನ್ಯಾಯಾಲಯಕ್ಕೆ ವಲಯ ಅರಣ್ಯಾಧಿಕಾರಿ, ಆನಂದಪುರಂ, ವಲಯ ಚೋರಡಿ ಇವರು ವಿಚಾರಣಾ ವರದಿ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:10–07–2006 ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that "the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".

ಅಲ್ಲದೇ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ಯಾವುದೇ ಸಾಕ್ಷಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಲಾರಿ ಕೆಎ–14–5019ನ್ನು ಮತ್ತು ವಾಹನದಲ್ಲಿದ್ದ ಸಾಗುವಾನಿ ನಾಟಾ 32=3.212 ಮತ್ತು ಬೀಟೆ ನಾಟಾ 02=0.156 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಆದೇಶ ಹೊರಡಿಸಿದ 30 ದಿನದೊಳಗೆ ಮಧ್ಯಂತರ ಅವಧಿಗೆ ಪಡೆದ ವಾಹನವನ್ನು ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಬೇಕು. ಒಂದು ವೇಳೆ ನಿಗಧಿತ ಸಮಯದೊಳಗೆ ಈ ವಾಹನವನ್ನು ನ್ಯಾಯಾಲಯಕ್ಕೆ ಹಾಜರ್ಪಡಸದೇ ಹೋದಲ್ಲಿ ಮಧ್ಯಂತರ ಅವಧಿಗೆ ವಾಹನ ಪಡೆಯುವಾಗ ಈ ನ್ಯಾಯಾಲಯಕ್ಕೆ ಆಧಾರವಾಗಿಟ್ಟ ಭದ್ರತಾ ಠೇವಣಿ ಹಣ ₹ 50,000/– ಮತ್ತು ಇಲ್ಲಿಯವರೆಗಿನ ಬಡ್ಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂದು ಭಾವಿಸುವುದು. ಈ

ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:17–09–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ

ಪಿ.ಆರ್. 1314 ಸಾಗರ ವಿಭಾಗ, ಸಾಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:34/09–10 ದಿನಾಂಕ:17–09–2011**

| | | |
|---|---|---|
| **ಉಪಸ್ಥಿತರು** | : | ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | : | ಶ್ರೀ ಸುರೇಶ್ ಬಿನ್ ಮಲ್ಲಪ್ಪ, ದೊಡ್ಮನಿ, ಮೂಗೂರು, ವೆಂಕಟಾಪುರ, ಆನವಟ್ಟಿ ಹೋಬಳಿ ಸೊರಬ ತಾಲ್ಲೂಕು. (ಶ್ರೀ ಎಸ್.ಎಂ.ಲೋಹಿತ್, ವಕೀಲರು, ಸಾಗರ) |

**ಪ್ರಸ್ತಾವನೆ:–**

ದಿ:16–11–2009 ರಂದು ಒಂದು ಮಾರುತಿ ವ್ಯಾನ್‌ನಲ್ಲಿ ಸಾಗುವಾನಿ ನಾಟಾ ಅಕ್ರಮ ಸಾಗಾಣಿಕೆಯಾದ ಬಗ್ಗೆ ಆನವಟ್ಟಿ ಶಾಖೆಯ ವನಪಾಲಕರು ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ:16–11–2009 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಆನವಟ್ಟಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸೊರಬ ತಾ. ಆನವಟ್ಟಿ ಹೋಬಳಿ ಕೋಟಿಪುರ ಗ್ರಾಮದ ಆನವಟ್ಟಿ–ತಿಳುವಳ್ಳಿ ಮುಖ್ಯರಸ್ತೆಯಲ್ಲಿ ಕಾಯುತ್ತಿರುವಾಗ ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ತಡೆದು ನಿಲ್ಲಿಸಿ, ವಾಹನದೊಳಗಡೆ ಪರಿಶೀಲಿಸಿ ನೋಡಿದಾಗ ಹಿಂಭಾಗದ ಸೀಟಿನ ಮೇಲೆ ಸಾಗುವಾನಿ 15 ತುಂಡುಗಳಿದ್ದು, ಅವುಗಳ ಅಳತೆ 0.271 ಎಂ3 ಪ್ರಮಾಣವಿದ್ದು, ಈ ನಾಟಾಗಳ ಬಗ್ಗೆ ರಹದಾರಿಯನ್ನು ವಾಹನದಲ್ಲಿದ್ದ ಆಸಾಮಿಗಳಾದ (1)ದೇವರಾಜ್ ದೊಡ್ಮನಿ ಬಿನ್ ಮಲ್ಲಪ್ಪ ದೊಡ್ಮನಿ, 25 ವರ್ಷ, ವೆಂಕಟಾಪುರ, ಮೂಗೂರು (ಪೋ) (2)ಮಹಮ್ಮದ್ ಜಾಫರ್ ಬಿನ್ ಫೀರ್‌ಸಾಬ್, 30 ವರ್ಷ, ಅಜಾದ್ ಬೀದಿ ಆನವಟ್ಟಿ ಇವರನ್ನು ವಿಚಾರಿಸಲಾಗಿ ಈ ನಾಟಾಗಳನ್ನು ಬೆಟ್ಟದಕುರ್ಲಿ ಸಾಗುವಾನಿ ನೆಡುತೋಪಿನಲ್ಲಿ ಕಡಿದು ತಂದಿರುವುದಾಗಿ ಮತ್ತು ನಾಟಾ ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿರುತ್ತಾರೆ. ಹಾಗೂ ತಪ್ಪಿಸಿಕೊಂಡವನ ಹೆಸರು, ವಿಳಾಸ ಕೇಳಲಾಗಿ ಮಹಮ್ಮದ್ ಬಿನ್ ಇಮಾಮ್‌ಸಾಬ್, ಕಚವಿ ಕೋಟಿಪುರ ವಾಸಿ, 30 ವರ್ಷ ಎಂದು ತಿಳಿಸಿದರು. ವಾಹನದಲ್ಲಿದ್ದ ನಾಟಾಗಳನ್ನು ಪರಿಶೀಲಿಸಲಾಗಿ, ಈ ನಾಟಾಗಳಿಗೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಆಸಾಮಿಗಳನ್ನು ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 33, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165 ಪ್ರಕಾರ ಆನವಟ್ಟಿ ಶಾಖಾ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:84/09–10ನ್ನು ದಾಖಲಿಸಿರುತ್ತಾರೆ. ವಾಹನವನ್ನು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ:ವಿವ:34/09–10 ದಿ:02–12–2009ರ ಪತ್ರದಲ್ಲಿ ಕೋರಲಾಯಿತು. ಅದರಂತೆ, ಸಾರಿಗೆ ಅಧಿಕಾರಿ, ಸಾಗರ ಇವರು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ದಿ:23–01–2010ರಲ್ಲಿ ಸಲ್ಲಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಸುರೇಶ್ ಬಿನ್ ಮಲ್ಲಪ್ಪ, ಮೂಗೂರು, ವೆಂಕಟಾಪುರ, ಸೊರಬ ತಾ. ಎಂದಿದ್ದು, ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)ರ ಪ್ರಕಾರ ಕಾರಣ ಕೇಳಿ ನೋಟಿಸ್‌ನ್ನು ದಿ:23–01–2010 ರಲ್ಲಿ ನೊಂದಾಯಿತ ಅಂಚೆ ಮೂಲಕ ಜಾರಿ ಮಾಡಿದೆ.

ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ದಿ:31–12–2009 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಅರ್ಜಿಯನ್ನು ದಿ:05–03–2011ರಂದು ತಿರಸ್ಕರಿಸಿ ಆದೇಶ ಹೊರಡಿಸಲಾಗಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ರವೀಂದ್ರ, ವನಪಾಲಕ, ಇವರನ್ನು ದಿ:16–07–2011ರಂದು ಈ ನ್ಯಾಯಾಲಯಕ್ಕೆ ಕರೆಸಿ ಸತ್ಯಪ್ರತಿಜ್ಞೆ ಬೋಧಿಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ಕಳೆದ 5 ವರ್ಷಗಳಿಂದ ನಾನು ಆನವಟ್ಟಿ ನಗರ ಶಾಖೆಯಲ್ಲಿ ವನಪಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ಆನವಟ್ಟಿ ವಲಯ ಅರಣ್ಯಾಧಿಕಾರಿಯವರಿಗೆ ಬಂದ ಮಾಹಿತಿಯಂತೆ ಮತ್ತು ಅವರ ಸೂಚನೆಯಂತೆ ಇತರೆ ಸಿಬ್ಬಂದಿಗಳೊಂದಿಗೆ ಕೋಟಿಪುರ ದೇವಾಲಯದ ಆನವಟ್ಟಿ–ತಿಳುವಳ್ಳಿ ರಸ್ತೆ ಬದಿ ಕಾಯುತ್ತಿದ್ದಾಗ ಆನವಟ್ಟಿ ಕಡೆಯಿಂದ ಒಂದು ಓಮ್ನಿ ಬಂತು. ಅದನ್ನು ತಡೆದು ನಿಲ್ಲಿಸಿದಾಗ ಅದರಲ್ಲಿ 3 ಜನ ವ್ಯಕ್ತಿಗಳಿದ್ದು ಓಡಲು ಪ್ರಯತ್ನಿಸಿದ್ದು, ಅವರಲ್ಲಿ 2 ಜನರನ್ನು ಹಿಡಿಯಲಾಯಿತು. ಒಬ್ಬನು ಓಡಿ ಹೋಗಿರುತ್ತಾನೆ. ವಾಹನವನ್ನು

ಪರಿಶೀಲಿಸಲಾಗಿ ಅದರಲ್ಲಿ 15 ಸಾಗುವಾನಿ ಹಸಿ ತುಂಡುಗಳಿದ್ದವು. ಅವುಗಳ ಮೇಲೆ ಇಲಾಖಾ ಛಾಪಾ ವಗೈರೆ ಇರಲಿಲ್ಲ. ಸದರಿ ವ್ಯಕ್ತಿಗಳನ್ನು ವಿಚಾರಿಸಲಾಗಿ ಅವರ ಹೆಸರು ದೇವರಾಜ ಮತ್ತು ಮಹ್ಮದ್ ಜಾಫರ್ ಎಂದು ತಿಳಿಸಿದ್ದು, ತುಂಡುಗಳನ್ನು ಬೆಟ್ಟದಕುರ್ಲಿ ನೆಡುತೋಪಿನಿಂದ ಕತ್ತರಿಸಿ ತಂದಿರುವುದಾಗಿ ಹೇಳಿದರು. 15 ತುಂಡುಗಳಿಗೆ ಕ್ರಮ ಸಂಖ್ಯೆ ಕೊಟ್ಟು ಹ್ಯಾಮರ್ ಸೀಲ್ ಹೊಡೆದು ಅವುಗಳನ್ನು ಮತ್ತು ಓಮ್ನಿ ವಾಹನ ಸಂಖ್ಯೆ ಕೆಎ–20–ಎಂ–5049 ವಾಹನವನ್ನು ಮಹಜರ್ ಅಡಿಯಲ್ಲಿ ಅಮಾನತ್ತುಪಡಿಸಿಕೊಳ್ಳಲಾಯಿತು. ನಂತರ ವಾಹನ ಹಾಗೂ ತುಂಡುಗಳೊಂದಿಗೆ ಕಛೇರಿಗೆ ವಾಪಾಸಾದೆವು. ಸ್ಥಳದಲ್ಲಿ ಮಾಡಿದ ಮಹಜರನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ ಪಿ1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು ಗುರುತಿಸಿದೆ. ಪ್ರಥಮ ವರ್ತಮಾನ ವರದಿಯನ್ನು ನಾನೇ ದಾಖಲಿಸಿದ್ದು, ಅದನ್ನು ನಿಶಾನೆ ಪಿ2 ಎಂದು, ನನ್ನ ಸಹಿಯನ್ನು 2ಎ ಎಂದು, ಜಪ್ತು ವರದಿಯನ್ನು ನಿಶಾನೆ ಪಿ3 ಎಂದು, ನನ್ನ ಸಹಿಯನ್ನು 3ಎ ಎಂದು ಗುರುತಿಸಿದೆ. ವಾಹನದಲ್ಲಿದ್ದ ಸಾಗುವಾನಿ ತುಂಡುಗಳನ್ನು ಸರ್ಕಾರಿ ನಾಟಾ ಸಂಗ್ರಹಾಲಯ, ಆನವಟ್ಟಿಗೆ ಮತ್ತು ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯ ಮೇರೆಗೆ ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರಕ್ಕೆ ಸಾಗಿಸಿದೆವು. ಆರೋಪಿಗಳನ್ನು ರಿಮ್ಯಾಂಡ್ ಅರ್ಜಿಯೊಂದಿಗೆ ನ್ಯಾಯಾಲಯಕ್ಕೆ ಹಾಜರ್ಪಡಿಸಲಾಯಿತು. ಮುಂದಿನ ತನಿಖೆಯನ್ನು ನಡೆಸಲು ವಲಯ ಅರಣ್ಯಾಧಿಕಾರಿಯವರಿಗೆ ಸಲ್ಲಿಸಿದೆನು. ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ".

ಪಾಟಿಸವಾಲು ಡಿಫೆನ್ಸ್ ಕಡೆಯ ವಕೀಲರು ಗೈರುಹಾಜರಾಗಿದ್ದರಿಂದ ಪಾಟಿಸವಾಲು ಇಲ್ಲವೆಂದು ತೀರ್ಮಾನಿಸಲಾಯಿತು.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:23–07–2011, 30–07–2011, 06–08–2011 ರಂದು ಮತ್ತು ವಾದ ಮಂಡಿಸಲು ದಿ:20–08–2011 ಮತ್ತು 27–08–2011ರಂದು ದಿನಾಂಕ ನೀಡಿ ತಿಳಿಸಿದರೂ ಸಹ ಡಿಫೆನ್ಸ್ ಕಡೆಯವರು ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಆದ್ದರಿಂದ ಮುಂದಿನ ಕ್ರಮಕ್ಕೆಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:27–08–2011ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವನಪಾಲಕರು ಜಪ್ತುಮಾಡಿದ್ದು, ಈ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ತಯಾರಿಸಿವುದನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಮಾರುತಿ ವ್ಯಾನ್ ಕೆಎ–20–ಎಂ–5049 ರಲ್ಲಿ ಅರಣ್ಯ ಉತ್ಪನ್ನವಾದ 15 ಸಾಗುವಾನಿ ನಾಟಾ 0.271ಎಂ3ನ್ನು ದಿ:16–11–2001ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಮಾರುತಿ ವ್ಯಾನ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:16–11–2009ರಂದು ಆನವಟ್ಟಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸೊರಬ ತಾ. ಆನವಟ್ಟಿ ಹೋಬಳಿ ಕೋಟಿಪುರ ಗ್ರಾಮದ ಕೋಟಿಪುರ ದೇವಾಲಯದ ಮುಂಭಾಗ ರಸ್ತೆಯಲ್ಲಿ ಕಾಯುತ್ತಿರುವಾಗ ಮಾರುತಿ ವ್ಯಾನ್ ಕೆಎ–20–ಎಂ–5049ರಲ್ಲಿ ಸಾಗುವಾನಿ ನಾಟಾ 15=0.217 ಎಂ3ನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಹಚ್ಚಿ ವಾಹನ, ಅರಣ್ಯ ಉತ್ಪನ್ನ, ಆಸಾಮಿಗಳನ್ನು ಇಲಾಖಾಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಸಾಗುವಾನಿ ನಾಟಾವನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಸುರೇಶ್ ಬಿನ್ ಮಲ್ಲಪ್ಪ, ದೊಡ್ಮನೆ, ವೆಂಕಟಾಪುರ ವಾಸಿ, ಮೂಗೂರು ಅಂಚೆ, ಆನವಟ್ಟಿ ಹೋಬಳಿ, ಸೊರಬ ತಾ. ಇವರು ದಿ:31–12–2009 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:23–01–2010 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ಪಡೆಯಲು ಮೂರು ಬಾರಿ ದಿನಾಂಕಗಳನ್ನು ನೀಡಲಾಗಿದ್ದು. ಮತ್ತು ಡಿಫೆನ್ಸ್ ವಾದ ಮಂಡಿಸಲು ಎರಡು

ಬಾರಿ ದಿನಾಂಕವನ್ನು ನೀಡಲಾಗಿತ್ತು. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:16–11–2009 ರಂದು ಮಾರುತಿ ವ್ಯಾನ್ ಕೆಎ–20–ಎಂ–5049ರಲ್ಲಿ 15 ಸಾಗುವಾನಿ ನಾಟಾ 0.271 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಆನವಟ್ಟಿ ವಲಯದ ಆನವಟ್ಟಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಕೇಸು ದಾಖಲಿಸಿದ್ದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರಿಗೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಮತ್ತು ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:31–12–2009ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನು ವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನು ವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥಾವ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಅಲ್ಲದೇ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ಯಾವುದೇ ಸಾಕ್ಷದಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಮಾರುತಿ ವ್ಯಾನ್ ಕೆಎ–20–ಎಂ–5049 (ಇಂಜಿನ್ ನಂ:1967237, ಛಾಸ್ಸಿಸ್ ನಂಬರ್:370839) ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 15=0.271 ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:17–09–2011** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ

**ಪಿ.ಆರ್. 1227** ಸಾಗರ ವಿಭಾಗ, ಸಾಗರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ – I**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು – ಇವರ ನ್ಯಾಯಾಲಯ**

**ಸಂಖ್ಯೆ :ಡಬ್ಲ್ಯೂಸಿಎ/ಸಿಆರ್–31/2011ಎಫ್ ದಿನಾಂಕ:24/11/2011**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಸರಮ ಮಂಡಲ, ವೈಫ್ ಅಫ್: ದಿ: ಗಣೇಶ ಮಂಡಲ್, ಮತ್ತು ಇತರರು ಕದನಾರಿಪರ ರಾಮಚಂದ್ರ ಕಾಲಿ, ಬಸಂತಿ, ದಕ್ಷಿಣ–24, ಪರಗಣ–743312, ಪಶ್ಚಿಮ ಬಂಗಾಳ ರಾಜ್ಯ. | 1. | ಪ್ರಾಜೆಕ್ಟ್ ಮೇನೇಜರ್, ಮೆ: ಜೆ.ಐ.ಟಿ.ಎಫ್ ವಾಟರ್ ಇನ್ ಫ್ರಸ್ಟ್ರಕ್ಚರ್ ಲಿ, ಮೂಡ ಕಾಂಪ್ಲೆಕ್ಸ್, ಉರ್ವಸ್ಟೋರ್, ಅಶೋಕನಗರ, ಮಂಗಳೂರು |
| | 2. | M/s. Phoenix projects Pvt Ltd, Contractor, Jeevan Jyothi, Kalaikan Dettu Road,Bikarnakatte, Nanthoor,Manglore-1 |

**ಅಧಿಸೂಚನೆ**

ಅರ್ಜಿದಾರಳಾದ/ ಶ್ರೀಮತಿ ಸರಮ ಮಂಡಲ, ಇವರು ತಮ್ಮ ಗಂಡನಾದ ದಿವಂಗತ ಶ್ರೀ ಗಣೇಶ ಮಂಡಲ ಇವರು ಪ್ರತಿವಾದಿಗಳಾದ, ಮೆ: ಜೆ.ಐ.ಟಿ.ಎಫ್ ವಾಟರ್ ಇನ್ ಫ್ರಸ್ಟ್ರಕ್ಚರ್ ಲಿ; ಇದರಲ್ಲಿ ಎಲೆಕ್ಟ್ರೋ ಮೆಕಾನಿಕ್ **ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 11–9–2011 ರಂದು** ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ. ಜಿ. ನಾಗೇಶ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–1, ಮಂಗಳೂರು

**ಪಿ.ಆರ್. 1260**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ – I**
**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು – ಇವರ ನ್ಯಾಯಾಲಯ**

**ಸಂಖ್ಯೆ :ಡಬ್ಲ್ಯೂಸಿಎ/ಸಿಅರ್–20/2011ಎಫ್ ದಿನಾಂಕ: 5/8/2011**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು** |
|---|---|---|
| ಶ್ರೀಮತಿ ರಿಕಿಯದೇವಿ ವೈಫ್ ಅಫ್ ನಾರಾಯಣ ಸಿಂಗ್, ಮತ್ತು ಇತರರು, ವಿಳಾಸ: ಗೋಕುಲ್ ಅಂಚೆ, ಹರಿಹರ ಪುರ ತಾಲ್ಲೂಕು,ನಾರಾಯಣಪುರ ಪೋಲೀಸ್ ಠಾಣೆ, ಜಮತಾರ ಜಿಲ್ಲೆ, ಜಾರ್ಖಂಡ್ ರಾಜ್ಯ | | 1. ಮೆ: ಸ್ಟ್ರಟೆಜಿಕ್ ಸ್ಟೋರೇಜ ಆಫ್ ಕ್ರೂಡ್ ಆಯಿಲ್ ಪ್ರಾಜೆಕ್ಟ್, ಚಂದ್ರಹಾಸ ನಗರ, ಪೆರ್ಮುದೆ ಅಂಚೆ, ಮಂಗಳೂರು–574509<br>2. ಮೆ: ಎಸ್.ಕೆ.ಇ & ಕೆ.ಸಿ.ಟಿ. ಜಾಯಿಂಟ್ ವೆಂಚರ್, ಕೇರಾಫ್: ಮೆ: ಸ್ಟ್ರಟೆಜಿಕ್ ಸ್ಟೋರೇಜ ಆಫ್ ಕ್ರೂಡ್ ಆಯಿಲ್ ಪ್ರಾಜೆಕ್ಟ್, ಚಂದ್ರಹಾಸ ನಗರ ಪೆರ್ಮುದೆ ಅಂಚೆ, ಮಂಗಳೂರು–574509<br>3. ಮೆ: ಜೆ,ಎಂ.ಜೆ. ಪ್ರಮೋಷನ್, ಉಪ ಗುತ್ತಿಗೆದಾರರು, ಮೆ: ಎಸ್ .ಕೆ.ಇ & ಕೆ.ಸಿ.ಟಿ. ಜಾಯಿಂಟ್ ವೆಂಚರ್, ಚಂದ್ರಹಾಸ ನಗರ,ಪೆರ್ಮುದೆ ಅಂಚೆ, ಮಂಗಳೂರು–574509 |

**ಅಧಿಸೂಚನೆ**

ಅರ್ಜಿದಾರಳಾದ/ ಶ್ರೀಮತಿ ರಿಕಿಯ ದೇವಿ , ಇವರು ತಮ್ಮ ಗಂಡನಾದ ದಿವಂಗತ ಶ್ರೀ ನಾರಾಯಣ ಸಿಂಗ್ ಇವರು ಪ್ರತಿವಾದಿಗಳಾದ, ಮೆ: ಜೆ,ಎಂ.ಜೆ. ಪ್ರಮೋಷನ್, ಉಪ ಗುತ್ತಿಗೆದಾರರು, ಮೆ: ಎಸ್ .ಕೆ.ಇ & ಕೆ.ಸಿ.ಟಿ. ಜಾಯಿಂಟ್ ವೆಂಚರ್, ಇದರಲ್ಲಿ unskilled **ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 14–5–2011 ರಂದು** ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ. ಜಿ. ನಾಗೇಶ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–1, ಮಂಗಳೂರು

ಪಿ.ಆರ್. 804

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ – I ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು – ಇವರ ನ್ಯಾಯಾಲಯ

**ಸಂಖ್ಯೆ :ಡಬ್ಲ್ಯೂಸಿಎ/ಸಿಅರ್–21/2011ಎಫ್ ದಿನಾಂಕ: 14/9/2011**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಶ್ರೀಮತಿ ಪುಷ್ಪದೇವಿ, ವೈಫ್‌ಆಫ್:ಶ್ರೀ. ಸುಶಾರಾಮ ಚೌಹನ್<br>2. ಕು:ಕುಸುಬು ಚೌಹನ್,12 ವರ್ಷ<br>3 ಕು:.ನಿರ್ಮಲ ಕುಮಾರಿ, 9 ವರ್ಷ<br>4. ಪ್ರೇಮ್ ಕುಮಾರ್ ಚೌಹನ್, 7ವರ್ಷ<br>5. ನಿರಂಜನ ಚೌಹನ್,6 ವರ್ಷ ಬಿನ್: ಸುಸಾರಾಮ ಚೌಹನ್, ಜೋಗಾಸರ, ಪುರ್ ಅಂಚೆ, ಬಾಲಿಯಾ ಜಿಲ್ಲೆ, ರಾಜ್ಯ–277123 | | 1. ಮೆ: ಸ್ಟ್ರಟೆಜಿಕ್ ಸ್ಟೋರೇಜ ಆಫ್ ಕ್ರೂಡ್ ಆಯಿಲ್ ಪ್ರಾಜೆಕ್ಟ್, ಚಂದ್ರಹಾಸ ನಗರ, ಪೆರ್ಮುದೆ ಅಂಚೆ, ಮಂಗಳೂರು–574509<br>2. ಮೆ: ಎಸ್.ಕೆ.ಇ & ಕೆ.ಸಿ.ಟಿ. ಜಾಯಿಂಟ್ ವೆಂಚರ್, ಕೇರಾಫ್: ಮೆ: ಸ್ಟ್ರಟೆಜಿಕ್ ಸ್ಟೋರೇಜ ಆಫ್ ಕ್ರೂಡ್ ಆಯಿಲ್ ಪ್ರಾಜೆಕ್ಟ್, ಚಂದ್ರಹಾಸ ನಗರ ಪೆರ್ಮುದೆ ಅಂಚೆ, ಮಂಗಳೂರು–574509<br>3. ಮೆ: ಜೆ,ಎಂ.ಜೆ. ಪ್ರಮೋಷನ್, ಉಪ ಗುತ್ತಿಗೆದಾರರು, ಮೆ: ಎಸ್. ಕೆ.ಇ & ಕೆ.ಸಿ.ಟಿ. ಜಾಯಿಂಟ್ ವೆಂಚರ್, ಚಂದ್ರಹಾಸನಗರ, ಪೆರ್ಮುದೆ ಅಂಚೆ, ಮಂಗಳೂರು–574509 |

### ಅಧಿಸೂಚನೆ

ಅರ್ಜಿದಾರಳಾದ/ ಶ್ರೀಮತಿ ಪುಷ್ಪ ದೇವಿ, ಇವರು ತಮ್ಮ ಗಂಡನಾದ ದಿವಂಗತ ಶ್ರೀ ಸುಶಾರಾಮ ಚೌಹನ್ ಇವರು ಪ್ರತಿವಾದಿಗಳಾದ, ಮೆ: ಜೆ,ಎಂ.ಜೆ. ಪ್ರಮೋಷನ್, ಉಪ ಗುತ್ತಿಗೆದಾರರು, ಮೆ: ಎಸ್ .ಕೆ.ಇ & ಕೆ.ಸಿ.ಟಿ. ಜಾಯಿಂಟ್ ವೆಂಚರ್, ಇದರಲ್ಲಿ unskilled **ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 26–5–2011 ರಂದು** ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರೀತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ. ಜಿ. ನಾಗೇಶ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–1, ಮಂಗಳೂರು

ಪಿ.ಆರ್. 992

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್ : 258/2010–11, ದಿನಾಂಕ : 18–08–2011.**

**ಉಪಸ್ಥಿತರು: ಡಾ॥ ವೈ.ಮಂಜುನಾಥ್,** ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು. | | ಪರಾರಿ |

**ಪ್ರಕರಣದ ಮುಖ್ಯಾಂಶಗಳು :–**

ದಿನಾಂಕ : 11–12–2010ರಂದು ರಾತ್ರಿ 9–45 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಗಸ್ತು ನಿರತ ಸಮಯದಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಹುಣಸೂರು ತಾಲ್ಲೂಕು, ಗಾವಡಗೆರೆ ಹೋಬಳಿ, ಹರವೆ ರಾಮೇನಹಳ್ಳಿ ಗ್ರಾಮದಲ್ಲಿ ಇರುವ ರಾಜೇಶ್ @ ವೈಲೇಶ್ ಎಂಬುವವರ ಮನೆಯಲ್ಲಿ ಅಕ್ರಮವಾಗಿ 12.240 ಲೀ. ಮದ್ಯವನ್ನು ಹೊಂದಿ, ದಾಸ್ತಾನು ಮಾಡಿದ್ದು ಹಾಗೂ **ಕೆಎ–45/ಎಚ್–2949 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್** ವಾಹನವನ್ನು ಮದ್ಯ ಸಾಗಾಣಿಕೆ ಮಾಡುವ ಉದ್ದೇಶದಿಂದ ಉಪಯೋಗಿಸುತ್ತಿದ್ದ ಆರೋಪಕ್ಕಾಗಿ ಮದ್ಯ ಮತ್ತು ವಾಹನವನ್ನು ಜಪ್ತುಗೊಳಿಸಿ, ಆರೋಪಿ ಪರಾರಿಯಾಗಿರುವುದಾಗಿ ಪ್ರಕರಣ ಸಂ: 34/10–11ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(ಎ) ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಸೆಕ್ಷನ್ 32, 38(ಎ) ಮತ್ತು 43ರ ರೀತ್ಯಾ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದ ಪೈಕಿ ಮಾದರಿ ತೆಗೆಯಲಾದ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ವರದಿ ಪಡೆಯಲಾಗಿ, ಬಾಟಲಿಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ರಾಸಾಯನಿಕ ತಜ್ಞರ ದಿ: 27.01.2011ರ ವರದಿಯಲ್ಲಿ ತಮ್ಮ ಅಭಿಪ್ರಾಯವನ್ನು ನೀಡಿರುತ್ತಾರೆ.

ಹುಣಸೂರು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ : 26-07-2010ರಲ್ಲಿ ವರದಿಯನ್ನು ಸಲ್ಲಿಸಿ, ಈ ಪ್ರಕರಣದ ತನಿಖೆಯನ್ನು ಕೈಗೊಂಡು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಪಡೆಯಲಾಗಿದ್ದು, ಅದರಂತೆ ಸದರಿ ವಾಹನವು ಅಣ್ಣಸ್ವಾಮಿ ಬಿನ್ ರಾಮಯ್ಯ, ರಾಮನಹಳ್ಳಿ, ಹುಣಸೂರು ತಾ॥ ಇವರ ಒಡೆತನದಲ್ಲಿರುವುದು ಕಂಡುಬಂದಿರುತ್ತದೆ. ಸದರಿಯವರಿಗೆ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ನೋಟೀಸನ್ನು ನೀಡಲಾಗಿದ್ದು, ಅದರಂತೆ ವಾಹನವನ್ನು ಈಗಾಗಲೇ ದಿನಾಂಕ : 09-11-10ರಂದು ವೈಯಕ್ತಿಕ ಕಾರಣದಿಂದ ರಾಜೇಶ್ @ ವೈಲೇಶ್ ಇವರಿಗೆ ಮಾರಾಟ ಮಾಡಲಾಗಿರುತ್ತದೆ. ಆದ ಕಾರಣ ಈ ಪ್ರಕರಣದಲ್ಲಿ ಭಾಗಿಯಾಗಿರುವ ಬಗ್ಗೆ ನನ್ನ ಪಾತ್ರ ಏನು ಇರುವುದಿಲ್ಲವೆಂದು ನನಗೂ ಸದರಿ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ. ಆದ್ದರಿಂದ ಸದರಿ ವಾಹನವನ್ನು ನಿಲುಗಡೆ ಮಾಡಲು ಸೂಕ್ತ ಸ್ಥಳಾವಕಾಶ ಇಲ್ಲದೇ ಇರುವುದರಿಂದ ಗಾಳಿ, ಮಳೆ, ಬಿಸಿಲಿಗೆ ವಾಹನವು ಹಾಳಾಗುವ ಸಂದರ್ಭ ಇರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಶಿಫಾರಸು ಮಾಡಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ : 11-12-2010ರಂದು ಹುಣಸೂರು ತಾಲ್ಲೂಕು, ಗಾವಡಗೆರೆ ಹೋಬಳಿ, ಹರವೆ ರಾಮೇನಹಳ್ಳಿ ಗ್ರಾಮದಲ್ಲಿ ಇರುವ ರಾಜೇಶ್ @ ವೈಲೇಶ್ ಎಂಬುವವರ ಮನೆಯಲ್ಲಿ ಅಕ್ರಮವಾಗಿ 12.240 ಲೀ. ಮದ್ಯವನ್ನು ಹೊಂದಿ, ದಾಸ್ತಾನು ಮಾಡಿದ್ದು ಹಾಗೂ **ಕೆಎ-45/ಎಚ್-2949 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್** ವಾಹನವನ್ನು ಮದ್ಯ ಸಾಗಾಣಿಕೆ ಮಾಡಲು ಉಪಯೋಗಿಸುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (8) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಡಿಟಿಸಿಆರ್/258/2010-11, ದಿನಾಂಕ : 18-08-2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 34/2010-11, ದಿನಾಂಕ: 11-12-2010 ರಂದು ವಶಪಡಿಸಿಕೊಂಡ **ಕೆಎ-45/ಎಚ್-2949 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸ್ಪ್ಲೆಂಡರ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಆಗಸ್ಟ್ ತಿಂಗಳ 18ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್. 937

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ.

**ಸಂಖ್ಯೆ: ಡಿಟಿಸಿಆರ್ : 304/2010-11, ದಿನಾಂಕ : 18-08-2011.**

**ಉಪಸ್ಥಿತರು: ಡಾ॥ ವೈ.ಮಂಜುನಾಥ್,** ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ, ಪಿರಿಯಾಪಟ್ಟಣ. | | ಪರಾರಿ |

**ಪ್ರಕರಣದ ಮುಖ್ಯಾಂಶಗಳು :-**

ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಚುನಾವಣೆ ಹಿನ್ನೆಲೆಯಲ್ಲಿ ದಿನಾಂಕ : 19-12-2010 ರಂದು ಮಧ್ಯರಾತ್ರಿ 12-15 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ ಇವರು ಪಿರಿಯಾಪಟ್ಟಣ ತಾಲ್ಲೂಕು, ರಾವಂದೂರು ಗ್ರಾಮದಲ್ಲಿ ರಾತ್ರಿ ಗಸ್ತು

ನಿರತ ಸಮಯದಲ್ಲಿ ಬಂದ ಖಚಿತ ವರ್ತಮಾನದ ಮೇರೆಗೆ ಮುರುಗರಾಜೇಂದ್ರ ಶಾಖಾ ಮಠದ ಎದುರಿನ ರಸ್ತೆಯಲ್ಲಿ ಕಾವಲು ಕಾಯುತ್ತಿರುವಾಗ್ಗೆ ಕಿತ್ತೂರು ರಸ್ತೆ ಕಡೆಯಿಂದ ಬರುತ್ತಿದ್ದ ವಾಹನವನ್ನು ನಿಲ್ಲಿಸಲು ಸಿಬ್ಬಂದಿಯವರು ಸೂಚಿಸಿದರು. ವಾಹನವನ್ನು ನಿಲ್ಲಿಸದೇ ವೇಗವಾಗಿ ಮುಂದೆ ಚಲಿಸಿಕೊಂಡು ಹೋಗಿರುತ್ತಾರೆ. ಸದರಿ ವಾಹನವನ್ನು ಹಿಂಬಾಲಿಸಲಾಗಿ 1 ಕಿ.ಮೀ. ಅಂತರದಲ್ಲಿ ಆಸಾಮಿಗಳು ವಾಹನ ಮತ್ತು ರಟ್ಟಿನ ಪೆಟ್ಟಿಗೆಗಳನ್ನು ರಸ್ತೆಗೆ ಉರುಳಿಸಿ, ಪರಾರಿಯಾಗಿರುತ್ತಾರೆ. ಸದರಿ ವಾಹದಲ್ಲಿದ್ದ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ, ಕೆಎ–03/ವೈ–9495 ನೋಂದಣಿ ಸಂಖ್ಯೆಯ ಬಜಾಜ್ ಕ್ಯಾಲಿಬರ್ ವಾಹನದಲ್ಲಿ ಅಕ್ರಮವಾಗಿ 20.160 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡು ಆರೋಪಿಗಳು ಪರಾರಿಯಾಗಿರುವುದಾಗಿ ಪ್ರಕರಣ ಸಂ: 24/2010–11ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(ಎ) ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಸೆಕ್ಷನ್ 32, 38(ಎ) ಮತ್ತು 43ರ ರೀತ್ಯಾ ಮೊಕದಮೆಯನ್ನು ದಾಖಲಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದ ಪೈಕಿ ಮಾದರಿ ತೆಗೆಯಲಾದ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವರದಿ ಪಡೆಯಲಾಗಿ, ಬಾಟಲಿಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ದಿ: 27.01.2011 ರ ವರದಿಯಲ್ಲಿ ತಜ್ಞರು ಅಭಿಪ್ರಾಯವನ್ನು ನೀಡಿರುತ್ತಾರೆ.

ಪಿರಿಯಾಪಟ್ಟಣ ವಲಯದ ಅಬಕಾರಿ ನಿರೀಕ್ಷಕರು ಈ ಪ್ರಕರಣದ ತನಿಖೆಯನ್ನು ಕೈಗೊಂಡು ದಿ : 29–12–10 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಪೂರ್ವ ವಿಭಾಗ ಇವರಿಗೆ ವಾಹನದ ಮಾಲೀಕತ್ವದ ವಿವರ ಕೋರಿ ಪತ್ರ ಬರೆದು, ನಂತರ ದಿನಾಂಕ : 08–02–11ರಂದು ಖುದ್ದಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಬಿ ವಹಿಯ ಪ್ರತಿಯನ್ನು ಪಡೆಯಲಾಯಿತು. ಅದರಂತೆ ಸದರಿ ವಾಹನವು ಗೋವಿಂದರಾಜು ಕೆ. ಬಿನ್ ಕಾಳೇಗೌಡ, ಸಂ. 310, ಲಾಲ್ ಬಹದ್ದೂರ್ ನಗರ, ಬಾಣಸವಾಡಿ ಪೋಸ್ಟ್, ಆರ್.ಎಂ.ನಗರ, ಬೆಂಗಳೂರು ಇವರ ಒಡೆತನದಲ್ಲಿರುತ್ತದೆ. ದಿನಾಂಕ : 11–02–11ರಂದು ಶ್ರೀ ಗೋವಿಂದರಾಜು ಬಿನ್ ಕಾಳೇಗೌಡ ಇವರಿಗೆ ಮೇಲ್ಕಂಡ ವಿಳಾಸಕ್ಕೆ ಕಾರಣ ಕೇಳಿ ನೋಟಿಸನ್ನು ಅಂಚೆ ಮೂಲಕ ಪೋಸ್ಟ್ ಮಾಡಲಾಗಿ, ಸದರಿ ವಿಳಾಸದಲ್ಲಿ ಗೋವಿಂದರಾಜ್ ಇಲ್ಲವೆಂದು ವಾಪಸ್ಸು ಆಗಿರುತ್ತದೆ. ದಿನಾಂಕ : 22–03–11 ರಂದು ಸದರಿ ವಿಳಾಸಕ್ಕೆ ಖುದ್ದಾಗಿ ಭೇಟಿ ನೀಡಿ ಪರಿಶೀಲಿಸಲಾಗಿ, ಅಕ್ಕಪಕ್ಕದ ಜನರಲ್ಲಿ ವಿಚಾರಿಸಲಾಗಿ, ಗೋವಿಂದರಾಜು ಬಿನ್ ಕಾಳೇಗೌಡ ಇವರು ಸದರಿ ವಿಳಾಸದಲ್ಲಿ ಸುಮಾರು ಎಂಟು ವರ್ಷಗಳ ಹಿಂದೆ ವಾಸವಿದ್ದರು. ನಂತರ ಮನೆಯನ್ನು ಬದಲಾವಣೆ ಮಾಡಿಕೊಂಡು ಹೋಗಿರುತ್ತಾರೆ. ಸದರಿ ವಿಳಾಸದಲ್ಲಿ ಪ್ರಸ್ತುತ ಹೊಸದಾಗಿ ಕಟ್ಟಡ ಕಟ್ಟಲಾಗಿರುತ್ತದೆ. ಈ ಕಟ್ಟಡವು ಎ. ಸೌಭಾಗ್ಯ ಬಿನ್ ಎನ್. ಅ0ಜನಪ್ಪ ಎಂಬುವವರಿಗೆ ಸೇರಿರುತ್ತದೆ ಎಂದು ತಿಳಿಸಿರುತ್ತಾರೆ. ಕಾರಣ ಕೇಳಿ ನೋಟಿಸ್‌ನ್ನು ಸದರಿ ವಿಳಾಸದ ಗೋಡೆಯ ಮೇಲೆ ಅ0ಟಿಸಿ, ಸದರಿ ವ್ಯಕ್ತಿ ಕಂಡುಬಂದರೆ ಮಾಹಿತಿ ನೀಡುವಂತೆ ಪಿರಿಯಾಪಟ್ಟಣ ವಲಯ ಕಚೇರಿಯ ದೂರವಾಣಿ ಸಂಖ್ಯೆಯನ್ನು ನೀಡಲಾಯಿತು. ಹಾಗೆಯೇ ದಿ : 24–03–11ರಂದು ಘಟನೆ ನಡೆದ ಗ್ರಾಮಕ್ಕೆ ತೆರಳಿ ಗ್ರಾಮದಲ್ಲಿ ಈ ಮೊಕದ್ದಮೆಗೆ ಸಂಬಂಧಿಸಿದಂತೆ ವಿಚಾರ ಮಾಡಲಾಗಿ ಆರೋಪಿಯ ಬಗ್ಗೆ ಮಾಹಿತಿ ಕೋರಿ ಸ್ಥಳ ಮಹಜರ್ ಕ್ರಮಜರುಗಿಸಲಾಯಿತು. ವಾಹನದ ಮಾಲೀಕರು ಹಾಗೂ ಆರೋಪಿ ಯಾರೆಂದು ತಮಗೆ ಗೊತ್ತಿರುವುದಿಲ್ಲವೆಂದು ಗ್ರಾಮಸ್ಥರು ತಿಳಿಸಿದರು. ಮತ್ತು ಗುಪ್ತ ಮಾಹಿತಿಗಾರರನ್ನು ನೇಮಿಸಿ ತನಿಖೆ ಮಾಡಲಾಗಿ ಯಾವುದೇ ಮಾಹಿತಿಯು ಇದೂವರೆವಿಗೂ ದೊರೆತಿರುವುದಿಲ್ಲ. ಮೊಕದ್ದಮೆ ಸಂಬಂಧಿಸಿದ ಮಾಹಿತಿಯು ದೊರಕದ ಕಾರಣ ನ್ಯಾಯಾಲಯಕ್ಕೆ "ಸಿ" ವರದಿ ಸಲ್ಲಿಸಲು ಇಲಾಖಾ ಅನುಮತಿ ನೀಡಬೇಕೆಂದು ಕೋರಿರುತ್ತಾರೆ. ಈ ಸಂಬಂಧ ಹುಣಸೂರು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರು ಪ್ರತ್ಯೇಕವಾಗಿ ಶಿಫಾರಸ್ಸು ಮಾಡಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ: 19–12–2010ರಂದು ಪಿರಿಯಾಪಟ್ಟಣ ತಾಲ್ಲೂಕು, ರಾವಂದೂರು ಹೋಬಳಿ, ರಾವಂದೂರು–ಪಿರಿಯಾಪಟ್ಟಣ ಮುಖ್ಯ ರಸ್ತೆಯ, ಭೋಗನಹಳ್ಳಿ ಕ್ರಾಸ್‌ನ ರಸ್ತೆಯಲ್ಲಿ ಕೆಎ–03/ವೈ–9495 ನೋಂದಣಿ ಸಂಖ್ಯೆಯ ಬಜಾಜ್ ಕ್ಯಾಲಿಬರ್ ವಾಹನದಲ್ಲಿ ಅಕ್ರಮವಾಗಿ 20.160 ಲೀ. ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ವಾಹನದ ಮಾಲೀಕರಾದ ಗೋವಿಂದರಾಜು ಬಿನ್ ಕಾಳೇಗೌಡ, ಸಂ. 310, ಲಾಲ್ ಬಹದ್ದೂರ್ ನಗರ, ಬಾಣಸವಾಡಿ ಪೋಸ್ಟ್, ಆರ್.ಎಂ.ನಗರ, ಬೆಂಗಳೂರು ಇವರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (7) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಡಿಟಿಸಿಆರ್/304/2010–11, ದಿನಾಂಕ : 18–08–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ, ಪಿರಿಯಾಪಟ್ಟಣ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 24/2010–11, ದಿನಾಂಕ: 19–12–2010 ರಂದು ವಶಪಡಿಸಿಕೊಂಡ **ಕೆಎ–09/ವೈ–9495 ನೋಂದಣಿ ಸಂಖ್ಯೆಯ ಬಜಾಜ್ ಕ್ಯಾಲಿಬರ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

**GOVERNMENT OF INDIA**

**MINISTRY OF LABOUR**

**LABOUR BUREAU**

**Consumer Price Index Numbers for Industrial Workers (Base 2001-100)**

**MONTH : SEPTEMBER 2011**

| Group/Sub-group/Centre | Bangalore | Belgaum | Hubli-Dharwar | Mercara | Mysore |
|---|---|---|---|---|---|
| Food | | | | | |
| (a) Cereals & Products | 163 | 229 | 198 | 192 | 188 |
| (b) Pulses and & Products | 209 | 210 | 224 | 224 | 205 |
| (c) Oils & Fats | 223 | 224 | 219 | 205 | 205 |
| (d) Meat, Fish & Eggs | 245 | 279 | 264 | 218 | 247 |
| (e) Milk & Products | 194 | 195 | 187 | 186 | 202 |
| (f) Condiments & Spices | 238 | 204 | 247 | 208 | 215 |
| (g) Vegetables & Fruits | 208 | 254 | 237 | 213 | 215 |
| (h) Other Food | 230 | 201 | 204 | 201 | 206 |
| FOOD GROUP | 204 | 222 | 212 | 203 | 205 |
| Pan, Supari, Tobacco & Intoxicant | 190 | 197 | 186 | 159 | 198 |
| Fuel and Light | 153 | 175 | 167 | 305 | 171 |
| Housing Index | 205 | 199 | 227 | 101 | 212 |
| Clothing, Bedding and Footwear | 129 | 141 | 149 | 136 | 160 |
| Miscellaneous | | | | | |
| (a) Medical care | 183 | 169 | 158 | 163 | 147 |
| (b) Education, Recreation & Amusement | 174 | 145 | 202 | 152 | 115 |
| (c) Transport and Communication | 266 | 250 | 258 | 205 | 210 |
| (d) Personal Care & Effects | 188 | 154 | 179 | 170 | 168 |
| (e) Others | 196 | 175 | 152 | 191 | 188 |
| Miscellaneous Group | 209 | 177 | 190 | 177 | 163 |
| GENERAL INDEX | 197 | 201 | 202 | 191 | 191 |

**P.R. No. 1335**

**P. N. KAUNDAL,**
**ECONOMIC OFFICER**

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯ ನಡವಳಿಗಳು

**ವಿಷಯ:** 2011–12ರ ಸಾಲಿನಲ್ಲಿ "ಗ್ರೂಪ್–ಬಿ" ವರ್ಗದ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ವರ್ಗಾವಣೆಯ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರ ಸಂಖ್ಯೆ 2 ಒಇ 511 ಪಿಪಿಇ 2011, ದಿನಾಂಕ : 13–12–2011.

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು ಪರಸ್ಪರ ವರ್ಗಾವಣೆ ಮಾಡಲು ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅನುಮತಿಯನ್ನು ನೀಡಿರುತ್ತದೆ. ಸರ್ಕಾರದ ಅನುಮತಿಯಂತೆ ಅಂಕಣ (2)ರಲ್ಲಿ ನಮೂದಿಸಿರುವ ಅಧಿಕಾರಿಗಳನ್ನು ಅಂಕಣ (3)ರಲ್ಲಿ ನಮೂದಿಸಿರುವ ಸ್ಥಳಗಳಿಗೆ ಪರಸ್ಪರ ವರ್ಗಾವಣೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು, ಪದನಾಮ ಮತ್ತು ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ವರ್ಗಾವಣೆ ಮಾಡಲಾದ ಕಛೇರಿ ಮತ್ತು ಸ್ಥಳ |
|---|---|---|
| 1 | **ಆರ್. ಕೃಷ್ಣವೇಣಿ,** ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಹಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಳವಳ್ಳಿ | ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಯಳಂದೂರು. |
| 2 | **ಎಸ್. ಕೆ. ಅನುಪಮ,** ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಯಳಂದೂರು. | ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಹಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಳವಳ್ಳಿ |

ಮೇಲ್ಕಂಡ ಅಧಿಕಾರಿಗಳ ವರ್ಗಾವಣೆಯು ಕೋರಿಕೆಯ ಮೇರೆಗೆ ಆಗಿರುವುದರಿಂದ, ಅವರು ಯಾವುದೇ ರೀತಿಯ ಭತ್ಯೆ ಹಾಗೂ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

ಶ್ರೀಮತಿ ಆರ್. ಕೃಷ್ಣವೇಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಹಿವಿ) ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಳವಳ್ಳಿ ಅವರು ತಮ್ಮ ಹುದ್ದೆಯ ಪ್ರಭಾರವನ್ನು ಶ್ರೀ ಹೆಚ್. ವಿ. ಕೃಷ್ಣಮೂರ್ತಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಳವಳ್ಳಿ, ಅವರಿಗೆ ವಹಿಸಿಕೊಟ್ಟು, ಸದರಿ ಹುದ್ದೆಯ ಪ್ರಭಾರದಿಂದ ಬಿಡುಗಡೆ ಹೊಂದಿ, ವರ್ಗಾವಣೆಗೊಂಡ ಹುದ್ದೆಯ ಪ್ರಭಾರವನ್ನು ಶ್ರೀಮತಿ ಎಸ್. ಕೆ. ಅನುಪಮ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಯಳಂದೂರು, ಅವರಿಂದ ವಹಿಸಿಕೊಳ್ಳಲು ಸೂಚಿಸಲಾಗಿದೆ.

ಶ್ರೀಮತಿ ಎಸ್. ಕೆ. ಅನುಪಮ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಯಳಂದೂರು, ಅವರು ವರ್ಗಾವಣೆಗೊಂಡ ಹುದ್ದೆಯ ಪ್ರಭಾರವನ್ನು ಶ್ರೀ ಹೆಚ್. ವಿ. ಕೃಷ್ಣಮೂರ್ತಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಳವಳ್ಳಿ ಅವರಿಂದ ವಹಿಸಿಕೊಳ್ಳಲು ಸೂಚಿಸಲಾಗಿದೆ.

ಪ್ರಭಾರವನ್ನು ವಹಿಸಿಕೊಳ್ಳುವ ಅಧಿಕಾರಿಗಳು ಅವರ ಕಛೇರಿಗಳಿಗೆ ಸಂಬಂಧಪಟ್ಟಂತೆ ಗ್ರಂಥಾಲಯ, ಪೀಠೋಪಕರಣಗಳು, ಕಡತಗಳು ಮತ್ತು ವಹಿಗಳು ಇತ್ಯಾದಿಗಳನ್ನು ಒಳಗೊಂಡಂತೆ ವಿವರವಾದ ಪ್ರಭಾರವನ್ನು ವಹಿಸಿಕೊಂಡು, ಅವುಗಳ ಒಂದು ಪ್ರತಿಯನ್ನು ಸಿ.ಟಿ.ಸಿ.ಯೊಂದಿಗೆ ಸಂಬಂಧಪಟ್ಟ ವಿಭಾಗೀಯ ಕಛೇರಿಗೆ ಸಲ್ಲಿಸುವುದು. ಪ್ರಭಾರ ವಹಿಸಿಕೊಂಡ ಬಗ್ಗೆ ಸಿ.ಟಿ.ಸಿ.ಯನ್ನು ಮಾತ್ರ ಕವಚ ಪತ್ರದೊಂದಿಗೆ ದ್ವಿಪ್ರತಿಗಳಲ್ಲಿ ಈ ಕಛೇರಿಗೆ ಸಲ್ಲಿಸುವುದು. ಯಾವುದಾದರೂ ಗ್ರಂಥಾಲಯ ಪುಸ್ತಕ ಹಾಗೂ ವಸ್ತುಗಳು ಕಾಣೆಯಾಗಿದ್ದಲ್ಲಿ ಅಥವಾ ಹಾಳಾಗಿದ್ದಲ್ಲಿ ಪ್ರತ್ಯೇಕ ವರದಿಯನ್ನು ವಿಭಾಗೀಯ ಕಛೇರಿಗೆ ಕೂಡಲೇ ಸಲ್ಲಿಸುವುದು, ಇಲ್ಲದಿದ್ದಲ್ಲಿ, ಪ್ರಭಾರವನ್ನು ವಹಿಸಿಕೊಳ್ಳುವ ಅಧಿಕಾರಿಗಳೇ ಅಂತಹ ಪುಸ್ತಕ ಹಾಗೂ ವಸ್ತುಗಳಿಗೆ ಜವಾಬ್ದಾರರಾಗಿರುತ್ತಾರೆ.

**ಹೆಚ್. ಆರ್. ರೇಣುಕ,**
ಅಭಿಯೋಗ ಮತ್ತು ಸರ್ಕಾರಿ,
ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

**ಪಿ.ಆರ್. ನಂ. 1421**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ಸಂಖ್ಯೆ : ವಾಕೈ 47 ಜಕೈಸೇ 2011, ಬೆಂಗಳೂರು, ದಿನಾಂಕ : 04ನೇ ನವೆಂಬರ್, 2011.**

### ಅಧಿಸೂಚನೆ

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಜಂಟಿ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ ಕುರಿತು.

ಕೈಮಗ್ಗ ಮತ್ತು ಜವಳಿ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ : 01–01–2011ರಲ್ಲಿದ್ದಂತೆ ದಿನಾಂಕ : 09–09–2011ರಂದು ಪ್ರಕಟಿಸಿ, ನಿಗಧಿ ಪಡಿಸಿರುವ ಜೇಷ್ಠತೆಗೆ ಸಂಬಂಧಿಸಿದಂತೆ ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆ/ಸಲಹೆಗಳಿದ್ದಲ್ಲಿ, ಅವುಗಳನ್ನು ಸದರಿ ಅಧಿಸೂಚನೆ ಪ್ರಕಟಿಸಿದ 30 ದಿನಗಳ ಕಾಲಾವಕಾಶ ನೀಡಿ ಕರೆಯಲಾಗಿತ್ತು. ಆದರೆ, ಈ ಬಗ್ಗೆ ಯಾವುದೇ ಆಕ್ಷೇಪಣೆ/ಸಲಹೆಗಳು

ಬಾರದೇ ಇದ್ದುದರಿಂದ ಜಂಟಿ ನಿರ್ದೇಶಕ ವೃಂದದ ದಿನಾಂಕ : 01–01–2011ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೋಜಿ ರಾವ್,**
**ಪೀಠಾಧಿಕಾರಿ (ಜವಳಿ),**
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ದಿನಾಂಕ : 01–01–2011ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಜಂಟಿ ನಿರ್ದೇಶಕರುಗಳಅಂತಿಮ ಜೇಷ್ಠತಾ ಪಟ್ಟಿ**

**(ವೇತನ ಶ್ರೇಣಿ ರೂ. 20025–525–22650–600–26250–675–28275)**

**ಕೈಮಗ್ಗ ಮತ್ತು ಜವಳಿ ಇಲಾಖೆ ಅಸ್ತಿತ್ವಕ್ಕೆ ಬಂದಾಗಿನಿಂದ**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರಾದ | ನೇರ ನೇಮಕಾತಿ/ಮುಂಬಡ್ತಿ/ ವಿಲೀನ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಹೊಂದಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಝುರಪ್ಪ ಜಿ. ಮೊಳಕೇರಿ | ಮುಂಬಡ್ತಿ | 22–12–1960 | 23–09–1985 | 14–12–2009 | 14–12–2009 |
| 2 | ಆನಂದ್ ವಿ. ಕಿತ್ತೂರ್ | ಮುಂಬಡ್ತಿ | 21–02–1960 | 10–09–1985 | 14–12–2009 | 14–12–2009 |
| 3 | ವಿಜಯ್ ಕುಮಾರ್ ಬಿ. ನಿರಾಳೆ | ಮುಂಬಡ್ತಿ | 30–03–1960 | 10–09–1985 | 14–12–2009 | 14–12–2009 |
| 4 | ಸಿ. ಎಸ್. ಯೋಗೇಶ್ | ಮುಂಬಡ್ತಿ | 22–06–1967 | 07–01–1994 | 14–12–2009 | 14–12–2009 |

**ದೇವೋಜಿರಾವ್,**
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪಿ.ಆರ್. 1223**

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.**

**ಸಂ:ಇಎಕ್ಸ್‌ಇ:ಸಿಆರ್‌ಎಂ:1:1997–98, ದಿ:22–8–2011**

ಉಪಸ್ಥಿತರು: **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು** **ವಿರುದ್ಧ** **ಆರೋಪಿ**

ಆರಕ್ಷಕ ಉಪ ನಿರೀಕ್ಷಕರು,
ಶನಿವಾರಸಂತೆ.

ಚಂದ್ರಶೇಖರ ಬಿನ್ ರಂಗಪ್ಪ ಗೌಡ,
ಚಾಲಕ ಮತ್ತು ಇತರರು,
ಬೆಂಗಳೂರು.

**ಪ್ರಕರಣದ ಮುಖ್ಯಾಂಶಗಳು:–**

ದಿ:31–3–97ರಂದು ಶನಿವಾರಸಂತೆ ಠಾಣೆಯ ಆರಕ್ಷಕರ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಬೀಟಿಕಟ್ಟೆ ಗ್ರಾಮದಲ್ಲಿ ಕರ್ತವ್ಯದ ಮೇಲಿದ್ದ ಸಂದರ್ಭದಲ್ಲಿ ಸಮಯ ಸುಮಾರು 8.30ಗಂಟೆಗೆ ಶನಿವಾರಸಂತೆ ಕಡೆಯಿಂದ ಸೋಮವಾರಾಪೇಟೆ ಕಡೆಗೆ ಬರುತ್ತಿದ್ದ ಕ್ಯಾಂಟರ್ ಸಂ:ಕೆಎ–04–7850 ಬರುತ್ತಿದ್ದು ಅದನ್ನು ತಡೆದು ನಿಲ್ಲಿಸಿದಾಗ ಇದರಲ್ಲಿ ಚಾಲಕನಲ್ಲದೆ ಮತ್ತು ಎರಡು ಜನರಿದ್ದು ಅವರನ್ನು ಸದರಿ ವಾಹನದಲ್ಲಿ ಏನಿದೆ ಎಂದು ಕೇಳಿದಾಗ ಬೀರ್ ಎಂದು ತಿಳಿಸಿರುತ್ತಾರೆ. ಸದರಿ ಕ್ಯಾಂಟರ್‌ನಲ್ಲಿ ಬೀರ್ ಸಾಗಾಣಿಕೆ ಮಾಡಲು ರಹದಾರಿ ಪತ್ರ ಇಟ್ಟಿರುವುದಿಲ್ಲ. ಸದರಿ ಕ್ಯಾಂಟರ್‌ನ್ನು ಮಾಲು ಸಮೇತ ಠಾಣೆಗೆ ತಂದು ಅಧಿಕಾರಿಗಳು ಪರಿಶೀಲಿಸಿದಾಗ ಅದರಲ್ಲಿ ವಿವಿಧ ನಮೂನೆಯ ಒಟ್ಟು 312 ಪೆಟ್ಟಿಗೆ ಬೀರ್ ಇರುತ್ತದೆ. ವಾಹನದಲ್ಲಿ ಯಾವುದೇ ಅಧಿಕೃತವಾಗಿ ರಹದಾರಿ ಪತ್ರ ವಗೈರೆ ಇಲ್ಲದೆ ಸಾಗಾಣಿಕೆ ಮಾಡುವುದು ಅಬಕಾರಿ ಕಾಯ್ದೆಗೆ ವಿರೋಧವಾಗಿರುವುದರಿಂದ ಸದರಿ ಕ್ಯಾಂಟರ್

ಸಂ:ಕೆಎ–04–7850 ಮತ್ತು ಅದರಲ್ಲಿದ್ದ 312 ಪೆಟ್ಟಿಗೆ ಬೀರ್‌ನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಕ್ಯಾಂಟರ್‌ನಲ್ಲಿದ್ದ 1ನೇ ಚಂದ್ರಶೇಖರ್ ತಂದೆ ರಂಗಪ್ಪ, ಚಾಲಕ, 2ನೇ ಮಹೇಶ ತಂದೆ ನಂಜೇಗೌಡ, 3ನೇ ಮಲ್ಲೇಶ್ ತಂದೆ ಕೆಂಚಪ್ಪ ಲಾರಿ ಕ್ಲೀನರ್ ಎಂಬುವವರ ಮೇಲೆ ಶನಿವಾರಸಂತೆ ಆರಕ್ಷಕ ಠಾಣೆ ಕ್ರೈ.ನಂ:85:97ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮೇಲ್ಕಂಡ ಕ್ಯಾಂಟರ್ ಮತ್ತು ಬೀರ್‌ನ್ನು ಮುಂದಿನ ಕ್ರಮದ ಬಗ್ಗೆ ದಿ: 1–4–97ರಂದು ಅಬಕಾರಿ ಉಪ ನಿರೀಕ್ಷಕರು, ಸೋಮವಾರಪೇಟೆ ವಲಯ ರವರಿಗೆ ಮೊಕದ್ದಮೆಯನ್ನು ಹಸ್ತಾಂತರಿಸಲಾಗಿದೆ. ನಂತರ ಅಬಕಾರಿ ಉಪ ನಿರೀಕ್ಷಕರು ಸದರಿ ಕ್ಯಾಂಟರ್‌ನ್ನು ಬೀರ್‌ನ ಬಗ್ಗೆ ನಿಯಮ 43(ಎ)ಯ ಪ್ರಕಾರ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ ಇವರನ್ನು ಕೋರಿಕೊಂಡಿರುತ್ತಾರೆ.

ದಿ:22–4–97ರಂದು ವಾಹನದ ಮಾಲೀಕರ ಪರವಾಗಿ ವಕೀಲರು ಅರ್ಜಿಯನ್ನು ಸಲ್ಲಿಸಿ ವಾಹನದ ಮಾಲೀಕರ ವಿವರವನ್ನೊಳಗೊಂಡ ಆರ್.ಸಿ.ಪುಸ್ತಕದ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಮತ್ತು ದಿ:21–4–97ರಂದು ವಕಾಲತ್ತು ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರದಿಂದ ದಿ:5–5–97ರಲ್ಲಿ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ರಲ್ಲಿ ಕಾರಣ ಕೇಳಿ ನೋಟಿಸ್ ನೀಡಿ 15 ದಿವಸಗಳೊಳಗಾಗಿ ವಾಹನ ಮತ್ತು ಬೀರ್‌ಗೆ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು.

ಮೇಲ್ಕಂಡ ಕಾರಣ ಕೇಳಿ ನೋಟಿಸಿಗೆ ದಿ:7–5–97ರಂದು ವಾಹನದ ಮಾಲೀಕರು ಉತ್ತರವನ್ನು ಸಲ್ಲಿಸಿ ಸದರಿ ಲಾರಿಯನ್ನು ಯಾವುದೇ ಕಾನೂನು ಬಾಹಿರ ಚಟುವಟಿಕೆಗೆ ಬಳಸಿರುವುದಿಲ್ಲ ಹಾಗೂ ಕೇವಲ ಸುಳ್ಳು ಮೊಕದ್ದಮೆಯನ್ನು ದಾಖಲು ಮಾಡಿ ಲಾರಿಯನ್ನು ಪೋಲೀಸಲು ವಶಕ್ಕೆ ತೆಗೆದುಕೊಂಡಿರುತ್ತಾರೆ. ಆದುದರಿಂದ ಸದರಿ ವಾಹನಕ್ಕೆ ಇಲಾಖೆ ವಿಧಿಸುವ ಎಲ್ಲಾ ಷರತ್ತುಗಳಿಗೆ ಒಳಪಟ್ಟಂತೆ ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡುವಂತೆ ಈ ಪ್ರಾಧಿಕಾರದಲ್ಲಿ ಪ್ರಾರ್ಥಿಸಿಕೊಂಡಿರುತ್ತಾರೆ.

ಸದರಿ ಅರ್ಜಿದಾರರು ದಿ:7–5–97ರಂದು ಸಲ್ಲಿಸಿರುವ ಹೇಳಿಕೆಯಲ್ಲಿ ಸತ್ಯ ಇಲ್ಲದ್ದರಿಂದ ಮತ್ತು ಮಾಲೀಕರೇ ಉದ್ದೇಶಪೂರ್ವಕವಾಗಿ ಲಾಭಗಳಿಸುವ ಉದ್ದೇಶದಿಂದ ಸದರಿ ಕ್ಯಾಂಟರ್ ಸಂ:ಕೆಎ–04–7850ರಲ್ಲಿ ಬೀರ್‌ನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲು ಚಾಲಕನನ್ನು ನಿಯೋಜಿಸಿರುವುದು ಕಂಡುಬಂದಿರುವುದರಿಂದ, ಅಲ್ಲದೆ ಸದರಿ ಕ್ಯಾಂಟರ್‌ನ್ನು ಈ ಹಿಂದೆ ಸಹ ಇಂತಹದೇ ಕೃತ್ಯದಲ್ಲಿ ಬಳಸಿರುವ ಸಾಧ್ಯತೆ ಇದ್ದು, ದುರಾದೃಷ್ಟವಶಾತ್ ಈ ಬಾರಿ ಪೊಲೀಸ್ ಇಲಾಖೆಗೆ ಸಿಕ್ಕಿಬಿದ್ದು ಈ ಮೊಕದ್ದಮೆಯಿಂದ ನುಣುಚಿಕೊಳ್ಳುವ ಸಲುವಾಗಿ ಸುಳ್ಳು ಹೇಳಿಕೆ ನೀಡಿರುವುದು ಮೇಲ್ನೋಟಕ್ಕೆ ಸತ್ಯವೆಂದು ಕಂಡುಬಂದಿರುವುದರಿಂದ ಮತ್ತು ಅರ್ಜಿದಾರರ ಕೋರಿಕೆಯಂತೆ ಸದರಿ ವಾಹನವನ್ನು ಬಿಟ್ಟುಕೊಟ್ಟಲ್ಲಿ ಪುನಃ ಅದೇ ವ್ಯವಹಾರದಲ್ಲಿ ತೊಡಗುವ ಸಾಧ್ಯತೆ ಇರುವುದರಿಂದ ವಾಹನದ ಮಾಲೀಕರ ಅರ್ಜಿಯ ಕೋರಿಕೆಯನ್ನು ತಿರಸ್ಕರಿಸಿ ದಿ:5–6–97ರಂದು ಆದೇಶ ನೀಡಲಾಗಿರುತ್ತದೆ.

ವಾಹನದ ಮಾಲೀಕರಾದ ಶ್ರೀ ಎನ್.ಪುರುಷೋತ್ತಮ ರೆಡ್ಡಿ ಬಿನ್ ನಾರಾಯಣ ರೆಡ್ಡಿ, ನಂ:14,, 7ನೇ ಮುಖ್ಯ, ಮತ್ತೀಕೆರೆ, ಗೋಕುಲ್ ಎಕ್ಸ್‌ಟೆನ್ಷನ್, ಬೆಂಗಳೂರು, ಇವರು ದಿ:5–6–97ರ ಆದೇಶದ ವಿರುದ್ಧ ಮಾನ್ಯ ಘನ ಸೆಷನ್ಸ್ ನ್ಯಾಯಾಲಯದಲ್ಲಿ ಅಪೀಲು ಸಂ:37/97ರಂತೆ ದಾಖಲು ಮಾಡಿದ್ದು, ದಿ:6–12–97ರ ಮಾನ್ಯ ಘನ ಸೆಷನ್ಸ್ ನ್ಯಾಯಾಲಯದ ಆದೇಶದಲ್ಲಿ ಸದರಿ ಅಪೀಲನ್ನು ವಿಲೇಗೊಳಿಸಿ ರೂ. 35,000/–ಗಳ ಭದ್ರತೆ ಹಾಗೂ ವಾಹನದ ಇನ್ನುಳಿದ ಮೌಲ್ಯಕ್ಕೆ ಸಮನಾದ ಇಂಡೆಮಿನಿಟಿ ಬಾಂಡ್ ಮತ್ತು ಸಾಲ್ವೆಂಟ್ ಶ್ಯೂರಿಟಿಯನ್ನು ಭದ್ರತೆಯಾಗಿ ಪಡೆದು ವಾಹನವನ್ನು ಬಿಡುಗಡೆಗೊಳಿಸಲು ಷರತ್ತುಬದ್ಧವಾದ ಆದೇಶವನ್ನು ನೀಡಿರುತ್ತಾರೆ. ಸದರಿ ಆದೇಶದಂತೆ ವಾಹನದ ಮಾಲೀಕರಾದ ಶ್ರೀ ಪುರುಷೋತ್ತಮ ರೆಡ್ಡಿ, ಬಿನ್ ನಾರಾಯಣ ರೆಡ್ಡಿ, ನಂ:14,, 7ನೇ ಮುಖ್ಯ, ಮತ್ತೀಕೆರೆ, ಗೋಕುಲ್ ಎಕ್ಸ್‌ಟೆನ್ಷನ್, ಬೆಂಗಳೂರು, ಇವರು ರೂ. 35,000/–ಗಳ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಸೀಕೆರೆ ಶಾಖೆ, ಇವರಿಂದ ದಿ:9–4–99ರ ವರೆಗೆ ಅವಧಿಯುಳ್ಳ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದು ಸಲ್ಲಿಸಿದ್ದು ಮತ್ತು ಭದ್ರತೆ ಜಾಮೀನುದಾರರಾಗಿ ಶ್ರೀ ವಿ.ಪ್ರಭಾಕರ್, ಹಾಸನ ಗ್ರಾಮ, ಕಸಬ ಹೋಬಳಿ, ಹಾಸನ ತಾಲ್ಲೂಕು, ಹಾಸನ ಜಿಲ್ಲೆ ಇವರಿಗೆ ಸಂಬಂಧಪಟ್ಟ ಖಾತಾ ಸಂ:398ರಲ್ಲಿ ಇರುವ ಎರಡು ಅಂತಸ್ತಿನ ಆರ್.ಸಿ.ಸಿ. ಮನೆಯ ರೂ.8,00,000 (ಎಂಟು ಲಕ್ಷ) ಬೆಲೆ ಬಾಳುವ ಮನೆಯನ್ನು ಶ್ಯೂರಿಟಿಯಾಗಿ ಸಲ್ಲಿಸಿದ್ದು, ಈ ಹಿನ್ನಲೆಯಲ್ಲಿ ದಿ:16–1–98ರಂದು ವಾಹನದ ಮಾಲೀಕರಿಂದ ಸೂಕ್ತ ಸ್ವೀಕೃತಿಯನ್ನು ಪಡೆದುಕೊಂಡು ವಾಹನವನ್ನು ಮಾಲೀಕರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

ನಂತರ ದಿ:17–1–1998ರಂದು ಪ್ರಾದೇಶಿಕ ಅಧಿಕಾರಿಗಳಿಗೆ ಬೆಂಗಳೂರು ಉತ್ತರ ಇವರಿಗೆ ಪತ್ರ ಬರೆದು ವಾಹನಕ್ಕೆ ಸಂಬಂಧಪಟ್ಟ ಯಾವುದೇ ವ್ಯವಹಾರವನ್ನು ಮಾಡಲು ಈ ಕಛೇರಿಯಿಂದ ಒಪ್ಪಿಗೆಯನ್ನು ಕೇಳದೆ ಅವಕಾಶ ನೀಡಬಾರದು ಎಂದು ಕೋರಿ ಪತ್ರ ಬರೆಯಲಾಗಿರುತ್ತದೆ ಮತ್ತು ದಿ:6–2–99ರಂದು 21–4–99, 24–5–99ರಂದು ಮ್ಯಾನೇಜರ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಅರಸೀಕೆರೆ, ಹಾಸನ ಜಿಲ್ಲೆ ಇವರಿಗೆ ಪತ್ರ ಬರೆದು 9–1–99ರ ವರೆಗಿನ ವಾಯಿದೆಯನ್ನು ಇನ್ನು ಎರಡು ವರ್ಷಕ್ಕೆ ವಿಸ್ತರಿಸಿಕೊಡಬೇಕಾಗಿ ಕೋರಲಾಗಿರುತ್ತದೆ ಮತ್ತು ಸದರಿ ಪತ್ರದ ಪ್ರತಿಯನ್ನು ಸಂಬಂಧಪಟ್ಟ ವಾಹನ ಮಾಲೀಕರಿಗೂ ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿರುತ್ತದೆ. ಸದರಿ ಪತ್ರವು ವಾಹನದ ಮಾಲೀಕರು ನೀಡಿದಂತಹ ವಿಳಾಸಕ್ಕೆ ಕಳುಹಿಸಲಾಗಿದ್ದು, ಸದರಿ ಪತ್ರವು ವಾರಸುದಾರರಿಗೆ ಸ್ವೀಕೃತಿಯಾಗದೆ ಹಿಂತಿರುಗಿ ಬಂದಿರುತ್ತದೆ. ಸದರಿ ಪತ್ರವನ್ನು ಜಾಮೀನುದಾರರಾದ ಶ್ರೀ ಪ್ರಭಾಕರ ರವರಿಗೂ ಸಹ ಕಳುಹಿಸಲಾಗಿದ್ದು ಅವರಿಗೆ ಸ್ವೀಕೃತಿಯಾಗಿರುತ್ತದೆ. ನಂತರ ದಿ:30–3–2000ರ ಬ್ಯಾಂಕ್ ಗ್ಯಾರೆಂಟಿ ಅವಧಿಯನ್ನು ವಿಸ್ತರಿಸಿ ದಿ:14–6–99ರ ಪತ್ರದೊಂದಿಗೆ ಸಲ್ಲಿಸಿರುತ್ತಾರೆ. ನಂತರ ದಿ:27–10–99ರಂದು ಪತ್ರ ಬರೆದು ಸಾಲ್ವೆಂಟ್ ಶ್ಯೂರಿಟಿಯನ್ನು ನವೀಕರಿಸಲು ಸೂಚಿಸಲಾಗಿರುತ್ತದೆ. ಆದರೆ ನವೀಕರಿಸಿರುವುದಿಲ್ಲ. ಸದರಿ ಬ್ಯಾಂಕ್ ಗ್ಯಾರೆಂಟಿ ಅವಧಿ ದಿ:30–3–2000ಕ್ಕೆ ಮುಗಿದಿದ್ದು, ವಾಹನದ ಮಾಲೀಕರು ಸಾಲ್ವೆನ್ಸಿಯನ್ನಾಗಲೀ, ಬಿ.ಜಿ.ಯನ್ನಾಗಲೀ ನವೀಕರಿಸಿರುವುದಿಲ್ಲ. ಈ ಹಿನ್ನಲೆಯಲ್ಲಿ ವಾಹನದ ಮಾಲೀಕರು ಮತ್ತು ಜಾಮೀನುದಾರರಿಗೆ ದಿ:29–3–2000, 31–3–2000, 20–5–2000, 25–5–2000, 16–9–2000ಗಳಲ್ಲಿ ನೋಂದಣಿ ಅಂಚೆ ಮೂಲಕ ಪತ್ರ ಕಳುಹಿಸಲಾಗಿದ್ದು, ಇದು ವಾಹನದ ಮಾಲೀಕರಿಂದ ಹಿಂತಿರುಗಿ ಬಂದಿರುತ್ತದೆ. ಆದರೆ ಶ್ರೀ ಪ್ರಭಾಕರ್ ರವರು ದಿ:9–2–01ರಂದು ಪತ್ರ ಪಡೆದುಕೊಂಡಿರುವ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ ಮತ್ತು ಬ್ಯಾಂಕ್ ಮ್ಯಾನೇಜರ್ ರವರಿಗೂ ಕೂಡ ದಿ:27–5–2000ರಂದು ಪತ್ರ ಸ್ವೀಕೃತಿಯಾಗಿರುತ್ತದೆ.

ನಂತರ ದಿ:8–11–2000, 29–11–2000, 18–1–2001, 4–2–2001, 14–2–2001, 6–12–04, 31–3–97ರಂದು ವಿಚಾರಣೆಗಾಗಿ ಹಾಜರಾಗಲು ನೋಟಿಸ್ ನೀಡಲಾಗಿತ್ತು. ಜಾಮೀನುದಾರರಾದ ಶ್ರೀ ಪ್ರಭಾಕರ್ ರವರಿಗೆ ನೋಂದಣಿ ಅಂಚೆ ಮೂಲಕ ಕಳುಹಿಸಲಾದ ಎಲ್ಲಾ ಪತ್ರಗಳು ಸ್ವೀಕೃತಿಯಾಗಿರುತ್ತದೆ. ಆದರೆ ವಾಹನದ ಮಾಲೀಕರಿಗೆ ಪತ್ರ ಸ್ವೀಕೃತಿಯಾಗದೇ ಹಿಂತಿರುಗಿ ಬಂದಿರುತ್ತದೆ.

ವಾಹನದ ಮಾಲೀಕರಿಗೆ ದಿ:3–7–08ರಂದು ನೆನಪೋಲೆ ನೋಟಿಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಅದರಲ್ಲಿ ಬ್ಯಾಂಕ್ ಗ್ಯಾರೆಂಟಿ ಮುಕ್ತಾಯವಾದ ಬಗ್ಗೆ ತಿಳಿಸಿದ್ದು ಅಲ್ಲದೆ ವಾಹನ ಬಿಡುಗಡೆಯ ಸಮಯದಲ್ಲಿ ನ್ಯಾಯಾಲಯ ವಿಧಿಸಿರುವ ಷರತ್ತುಗಳನ್ನು ಸದರಿಯವರು ಉಲ್ಲಂಘನೆ ಮಾಡಿರುವುದು ಕಂಡುಬಂದಿರುತ್ತದೆ. ಆದುದರಿಂದ ಸದರಿ ಪತ್ರ ತಲುಪಿದ ಕೂಡಲೇ ಬ್ಯಾಂಕ್ ಗ್ಯಾರೆಂಟಿ ಮತ್ತು ಸಾಲ್ವೆಂಟ್ ಶ್ಯೂರಿಟಿಯನ್ನು ನವೀಕರಿಸಲು ಸೂಚಿಸಲಾಗಿತ್ತು ತಪ್ಪಿದಲ್ಲಿ ಕಂದಾಯ ಇಲಾಖೆಗೆ ಪತ್ರ ಬರೆದು ಮಾಲೀಕರು ಹಾಗೂ ಜಾಮೀನುದಾರರ ಹೆಸರಿನಲ್ಲಿರುವ ಆಸ್ತಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ತಿಳುವಳಿಕೆ ನೀಡಿ ನೋಂದಣಿ ಅಂಚೆ ಮೂಲಕ ಪತ್ರ ಕಳುಹಿಸಲಾಗಿದ್ದು, ಶ್ರೀ ಪುರುಷೋತ್ತಮ ರೆಡ್ಡಿಯವರ ಪತ್ರ ಹಿಂತಿರುಗಿ ಬಂದಿರುತ್ತದೆ. ಜಾಮೀನುದಾರರಾದ ಶ್ರೀ ಪ್ರಭಾಕರ್ ರವರು ಪತ್ರ ಪಡೆದುಕೊಂಡಿರುವ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ. ಆದರೆ ವಾಹನದ ಮಾಲೀಕರಿಂದಾಗಲೀ, ಜಾಮೀನುದಾರರಿಂದಾಗಲೀ ಪ್ರಾಧಿಕಾರಕ್ಕೆ ಯಾವುದೇ ಪತ್ರಗಳು/ಮಾಹಿತಿಗಳು ಸ್ವೀಕೃತವಾಗಿರುವುದಿಲ್ಲ.

ಆದುದರಿಂದ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರು ವಾಹನವನ್ನು ಮಧ್ಯಂತರಿಕವಾಗಿ ಪಡೆದುಕೊಳ್ಳುವ ಸಮಯದಲ್ಲಿ ನೀಡಲಾದ ಷರತ್ತು ಬದ್ಧವಾದ ಅಫಿಡವಿಟ್ ಇಂಡೆಮಿನಿಟಿ ಬಾಂಡ್, ಸಾಲ್ವೆಂಟ್ ಶ್ಯೂರಿಟಿಯಲ್ಲಿನ ಅಂಶದಂತೆ ಪ್ರಕರಣ ಮುಗಿಯುವ ವರೆಗೂ ವಾಹನದ ಮಾಲೀಕರಾದ 1) ಶ್ರೀ ಎನ್.ಪುರುಷೋತ್ತಮ ರೆಡ್ಡಿ, 2) ಹೆಚ್. ವಿ.ಪ್ರಭಾಕರ ರವರು ಪೂರ್ಣ ಜವಾಬ್ದಾರರಾಗಿರುತ್ತೇವೆಂದು ಸಹಿ ಮಾಡಿ ಸಲ್ಲಿಸಿದ್ದು, ನಂತರ ದಿ:6–12–97ರ ಘನ ನ್ಯಾಯಾಲಯದ ಆದೇಶದಲ್ಲಿನ ಷರತ್ತುಗಳನ್ನು ಉಲ್ಲಂಘಿಸಿರುತ್ತಾರೆ.

ವಾಹನವನ್ನು ಹಾಗೂ ನೀಡಿರುವ ಭದ್ರತೆಯನ್ನು ಮತ್ತು ಜಾಮೀನುದಾರರು ನೀಡಿರುವ ಭದ್ರತೆಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ನೋಟಿಸನ್ನು ನೀಡುತ್ತಿದ್ದರು ಸದರಿ ಪ್ರಕರಣವನ್ನು ವಿಲೇಗೊಳಿಸಲು ವಾಹನದ ಮಾಲೀಕರು ಸೂಕ್ತ ರೀತಿ ಸಹಕರಿಸದೇ ಅನಾವಶ್ಯಕವಾಗಿ ಕಾಲವಿಳಂಭ ಮಾಡುತ್ತಿರುವುದು ಅಲ್ಲದೆ ಪ್ರಕರಣದ ವಿಚಾರಣೆಗೂ ಹಾಜರಾಗುತ್ತಿಲ್ಲದಿರುವುದು ಹಾಗೂ ವಾಹನ ಮಧ್ಯಂತರ ಬಿಡುಗಡೆ ಸಮಯದಲ್ಲಿ ನ್ಯಾಯಾಲಯದ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವ ಕಾರಣದಿಂದ ವಾಹನ ಕ್ಯಾಂಟರ್ ಸಂ:ಕೆಎ–04–7850ರನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಮತ್ತು ಭದ್ರತೆಯಾಗಿ ಶ್ರೀ ವಿ.ಪ್ರಭಾಕರ್, ಹಾಸನ ಗ್ರಾಮ, ಕಸಬ ಹೋಬಳಿ, ಹಾಸನ ತಾಲ್ಲೂಕು, ಹಾಸನ ಜಿಲ್ಲೆ ಇವರಿಗೆ ಸಂಬಂಧಪಟ್ಟ ಖಾತಾ ಸಂ:398ರಲ್ಲಿ ಇರುವ ಎರಡು ಅಂತಸ್ತಿನ ಆರ್.ಸಿ.ಸಿ. ಮನೆಯ ರೂ.8,00,000(ಎಂಟು ಲಕ್ಷ) ಬೆಲೆ ಬಾಳುವ ಮನೆಯನ್ನು ಶ್ಯೂರಿಟಿಯಾಗಿ ಸಲ್ಲಿಸಿರುವ ಸಾಲ್ವೆಂಟ್ ಶ್ಯೂರಿಟಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನದ ಮೌಲ್ಯ ರೂ.2,85,000/–(ಎರಡು ಲಕ್ಷದ ಎಂಭತ್ತೈದು ಸಾವಿರ)ಗಳನ್ನು ಭೂಕಂದಾಯ ನಿಯಮದನ್ವಯ ವಸೂಲು ಮಾಡಲು ಕ್ರಮ ಜರುಗಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್ ಇ:ಸಿಆರ್ಎಂ:1:1997–98, ದಿ:22–8–2011**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಮೇಲೆ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 'ಬಿ' ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಶನಿವಾರಸಂತೆ ಠಾಣೆ ರವರ ಕ್ರೈ.ನಂ:85/97ರಲ್ಲಿ ಅಕ್ರಮ ಬೀರ್ ಸಾಗಾಣಿಕೆ ಸಂಬಂಧ ಜಪ್ತುಪಡಿಸಿದ ವಾಹನ ಕ್ಯಾಂಟರ್ ಸಂ:ಕೆಎ–04–7850ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ವಾಹನದ ಮಾಲೀಕರು ಮತ್ತು ಜಾಮೀನುದಾರರು ಭದ್ರತೆಯಾಗಿ ನೀಡಿರುವ ಸಾಲ್ವೆಂಟ್ ಶ್ಯೂರಿಟಿ, ಇಂಡೆಮಿನಿಟಿ ಬಾಂಡ್ ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಸದರಿ ವಾಹನದ ಮೌಲ್ಯವನ್ನು ಜಾಮೀನುದಾರರಾದ ಶ್ರೀ ವಿ.ಪ್ರಭಾಕರ್ ಇವರಿಗೆ ಸಂಬಂಧಪಟ್ಟ ಹಾಸನ ಗ್ರಾಮ, ಕಸಬ ಹೋಬಳಿ, ಹಾಸನ ತಾಲ್ಲೂಕು, ಹಾಸನ ಜಿಲ್ಲೆ ಇಲ್ಲಿನ ಮುನ್ಸಿಪಲ್ ಖಾತಾ ಸಂ:398ರಲ್ಲಿ ಇರುವ ಎರಡು ಅಂತಸ್ತಿನ ಆರ್.ಸಿ.ಸಿ. ಮನೆಯ ರೂ.8,00,000 (ಎಂಟು ಲಕ್ಷ) ಬೆಲೆ ಬಾಳುವ ಮನೆಯ ಮೂಲಕ ಭೂಕಂದಾಯ ನಿಯಮದನ್ವಯ ವಸೂಲು ಮಾಡಲು ಕ್ರಮ ಜರುಗಿಸಲು ಆದೇಶ ನೀಡಿದೆ.

ಈ ಆದೇಶವನ್ನು ದಿ:19–8–11ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.ನಂ. 914

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.**

**ಸಂ:ಇಎಕ್ಸ್ಇ:3:ಡಿಟಿಸಿಆರ್ಎಂ:369:2000–01 ದಿ:30–9–2011**

ಉಪಸ್ಥಿತರು : **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| ಫಿರ್ಯಾದುದಾರರು | ವಿರುದ್ಧ | ಅರ್ಜಿದಾರರು |
|---|---|---|
| ಆರಕ್ಷಕ ವೃತ್ತ ನಿರೀಕ್ಷಕರು,<br>ಗೋಣಿಕೊಪ್ಪ. | | ಶೈನಿ ಸಿ.ಪೌಲ್,<br>ಸೆಂಟ್ ಅಂತೋಣಿ ಕಾನ್ವೆಂಟ್ ಶಾಲೆ,<br>ಪೊನ್ನಂಪೇಟೆ. |

**ಪ್ರಕರಣದ ಮುಖ್ಯಾಂಶಗಳು:–**

ದಿ:8–11–01ರಂದು ಗೋಣಿಕೊಪ್ಪ ವೃತ್ತ ನಿರೀಕ್ಷಕರು, ಪೊನ್ನಂಪೇಟೆ ಠಾಣೆಯಲ್ಲಿರುವಾಗ ಪೊನ್ನಂಪೇಟೆ ಠಾಣಾ ಸರಹದ್ದಿಗೆ ಸೇರಿದ ಹಳ್ಳಿಗಟ್ಟು ಗ್ರಾಮದಲ್ಲಿ ಜೀಪಿನಲ್ಲಿ ಅಕ್ರಮವಾಗಿ ನಕಲಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಲಾಗುತ್ತಿದೆ ಎಂಬುದಾಗಿ ದೊರೆತ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಯವರೊಂದಿಗೆ ಇಲಾಖಾ ಜೀಪಿನಲ್ಲಿ ಹಳ್ಳಿಗಟ್ಟು ಗ್ರಾಮದ ಬಸ್ಸು ತಂಗುದಾಣದಲ್ಲಿ ನಿಂತು ಕಾಯುತ್ತಿರುವ ಸಂದರ್ಭದಲ್ಲಿ ಪೊನ್ನಂಪೇಟೆ ಕಡೆಯಿಂದ ಬರುತ್ತಿದ್ದ ಜೀಪು ಸಂ:ಕೆಎ–12–ಎಂ–3421ರನ್ನು ಸಂಶಯದಿಂದ ತಡೆದು ನಿಲ್ಲಿಸಿದಾಗ ಒಬ್ಬ ಅಸಾಮಿಯು ಜೀಪಿನಿಂದ ಇಳಿದು ಓಡಿಹೋಗಿರುತ್ತಾನೆ. ನಂತರ ಜೀಪನ್ನು ಸುತ್ತುವರೆದು ಪರಿಶೀಲಿಸಿದಾಗ ಚಾಲಕರನ್ನು ಸೇರಿ ಒಟ್ಟು ಸಾಲ್ಕು ಜನರಿದ್ದು, ಜೀಪಿನ ಹಿಂದುಗಡೆ ಒಟ್ಟು 11 ಪ್ಲಾಸ್ಟಿಕ್ ಚೀಲಗಳಿದ್ದು ಅವುಗಳಲ್ಲಿ ಸಾರಾಯಿ ಪ್ಯಾಕೇಟುಗಳನ್ನು ತುಂಬಿರುವುದು ಕಂಡುಬಂತು. ಸದರಿ ಸಾರಾಯಿ ಪ್ಯಾಕೇಟುಗಳನ್ನು ಜೀಪಿನಲ್ಲಿ ಸಾಗಾಣಿಕೆ ಮಾಡಲು ರಹದಾರಿ ಪತ್ರ ವಗೈರೆ ಕೇಳಿದಾಗ ಯಾವುದೂ ಇಲ್ಲವೆಂದು ಉತ್ತರಿಸಿರುತ್ತಾರೆ. ನಂತರ ಪಂಚಾಯಿತುದಾರರ ಸಮಕ್ಷಮ ಪರಿಶೀಲಿಸಿ ಎಣಿಸಿ ನೋಡಿದಾಗ 100ಮಿಲಿಯ 2500 ಸಾರಾಯಿ ಪ್ಯಾಕೇಟುಗಳು ಪತ್ತೆಯಾಗಿರುತ್ತದೆ. ಸದರಿ ಸಾರಾಯಿ ಪ್ಯಾಕೇಟುಗಳ ಮೇಲೆ ಮೈಸೂರು ಶುಗರ್ ಕಂಪೆನಿ ಲಿ., ಕೊಡಗು ಜಿಲ್ಲೆ, ಮದ್ಯಪಾನ ಆರೋಗ್ಯಕ್ಕೆ ಹಾನಿಕರ, ಲೈಸೆನ್ಸ್‌ನಂ:ಇಸಿಇ:ಎಬಿಜೆ:13:99, ದಿ:30–6–99, 3/2000 ಕರ್ನಾಟಕ ಸರ್ಕಾರ ಎಂದು ಬರೆಯಲಾಗಿರುತ್ತದೆ. ಆರೋಪಿಗಳ ಹೆಸರು ವಿಚಾರಿಸಿದಾಗ 1) ಪಾಲಂದಿರ ಜಯ ಯಾನೆ ಕಾರ್ಯಪ್ಪ ಬಿನ್ ನಂಜಪ್ಪ, ಜೋಡುಬಿಟ್ಟಿ, ಹಳ್ಳಿಗಟ್ಟು ಗ್ರಾಮ 2) ಕೋಳೇರ ಪ್ರಕಾಶ ಯಾನೆ ನಂಜಪ್ಪ ಬಿನ್ ಸುಬ್ಬಯ್ಯ, ಮರಪಾಲ ನೋಕ್ಯ ತಿತಿಮತಿ ಗ್ರಾಮ 3) ವಿ.ಎಂ.ಥೋಮಸ್ ಯಾನೆ ಟೋಮಿ(ಜೀಪ್ ಚಾಲಕ) ಬಿನ್ ಮೈಕಲ್, ಪೊನ್ನಪ್ಪಸಂತೆ 4) ಪೊನ್ನಚ್ಚನ ಸಣ್ಣಪ್ಪ ಬಿನ್ ಚಿನ್ನಪ್ಪ, ಮರಪಾಲ ತಿತಿಮತಿ ಗ್ರಾಮ ಓಡಿಹೋದ ಅಸಾಮಿಯ ಹೆಸರು ವಿಳಾಸ ಕೇಳಿದಾಗ 5) ಪುದಿರಮಾಡ ಮುತ್ತು ಯಾನೆ ತಮ್ಮಯ್ಯ, ಅಮ್ಮತ್ತಿ ಹೊಸೂರು ಎಂದು ತಿಳಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯ್ದೆ ಸೆಕ್ಷನ್ 32, 34 ಮತ್ತು 43ಎ ಪ್ರಕಾರ ಅಪರಾವಾದ್ದರಿಂದ ಮೇಲ್ಕಂಡವರ ಮೇಲೆ ಪೊನ್ನಂಪೇಟೆ ಆರಕ್ಷಕ ಉಪ ನಿರೀಕ್ಷಕರ ಕ್ರೈಂ. ಸಂ:209/2001, ದಿ:8–11–2001ರಂತೆ ಮೊಕದ್ದಮೆ ದಾಖಲು ಮಾಡಿಕೊಂಡು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಜೀಪ್ ಸಂ:ಕೆಎ–12–ಎಂ–3421ರನ್ನು ಮತ್ತು ಸ್ವೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು, ಪೊನ್ನಂಪೇಟೆ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಪ್ರಕರಣದ ಬಗ್ಗೆ ಶ್ರೀಮತಿ ಶೈನಿ ಸಿ.ಪೌಲ್ ಕೋಂ ಸಿ.ಟಿ.ಪೌಲ್, ಬಿಳೂರು ಗ್ರಾಮ, ಪೊನ್ನಪ್ಪಸಂತೆ ಅಂಚೆ, ವಿರಾಜಪೇಟೆ ತಾಲ್ಲೂಕು ಇವರು ವಾಹನದ ಅಧಿಕೃತ ಮಾಲೀಕರೆಂದು ತಮ್ಮ ಪರ ವಕೀಲರ ಮೂಲಕ ದಿ:19–11–01 ರಂದು ಅರ್ಜಿಯನ್ನು ಸಲ್ಲಿಸಿ ವಾಹನದ ನೋಂದಣಿ ಪುಸ್ತಕ, ವಾಹನದ ಇನ್‌ಶೂರೆನ್ಸ್‌ನ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಸಲ್ಲಿಸಿದ್ದು, ವಾಹನವನ್ನು ತನ್ನ ಉಪಯೋಗಕ್ಕಾಗಿ ಹಾಗೂ ಶಾಲಾ ಮಕ್ಕಳನ್ನು ಕರೆದುಕೊಂಡು ಹೋಗುವುದಕ್ಕಾಗಿ ಸಾಲ ಮಾಡಿ ಖರೀದಿಸಿದ್ದು, ಸದರಿ ವಾಹನವನ್ನು ಯಾವುದೇ ಕಾನೂನು ಬಾಹಿರ ವಸ್ತುಗಳ ಸಾಗಾಣಿಕೆಗೆ ಬಳಸದೇ ಇದ್ದರೂ ಸಹ ಉದ್ದೇಶ ಪೂರ್ವಕವಾಗಿ ಆರಕ್ಷಕ ಅಧಿಕಾರಿಗಳು ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳ ಸಾಗಾಣಿಕೆಯಾಗುತ್ತಿದೆ ಎಂದು ಆರೋಪವನ್ನು ಹೊರಿಸಿ ವಾಹನವನ್ನು ವಶಪಡಿಸಿಕೊಂಡು ಮೊಕದ್ದಮೆ ದಾಖಲಿಸಿರುತ್ತಾರೆ. ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ಯಾವುದೇ ಭದ್ರತೆ ಇಲ್ಲದೇ ಹಾಗೂ ಚಾಲನೆ ಇಲ್ಲದೇ ನಿಲ್ಲಿಸಿರುವುದರಿಂದ ವಾಹನವು ಅದರ ಮೌಲ್ಯವನ್ನು ಕಳೆದುಕೊಳ್ಳುವುದಲ್ಲದೇ ಜೀವನೋಪಾಯಕ್ಕೆ ತುಂಬಾ ತೊಂದರೆಯಾಗಿರುವುದರಿಂದ ಸದರಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡಿರುತ್ತಾರೆ.

ಈ ಸಂಬಂಧ ನ್ಯಾಯಾಲಯದಲ್ಲಿ ಸದರಿಯವರ ಅರ್ಜಿಯನ್ನು ಪರಿಶೀಲಿಸಿ ಅವರ ಕೋರಿಕೆಯಂತೆ ಜೀಪನ್ನು ತೆರೆದ ಪ್ರದೇಶದಲ್ಲಿ ಯಾವುದೇ ಭದ್ರತೆ ಇಲ್ಲದೇ ಹಾಗೂ ಚಾಲನೆ ಇಲ್ಲದೇ ನಿಲ್ಲಿಸಿರುವುದರಿಂದ ಸದರಿ ವಾಹನವು ಅದರ ಮೌಲ್ಯವನ್ನು ಕಳೆದುಕೊಳ್ಳುವುದಲ್ಲದೇ ಹವಾಮಾನ ವೈಪರೀತ್ಯದಿಂದ ವಾಹನದ ಬಿಡಿಭಾಗಗಳು ಉಪಯೋಗಕ್ಕೆ ಬಾರದೇ ಇರುವಂತಹ ಸ್ಥಿತಿಯನ್ನು ಮನಗಂಡು ಅರ್ಜಿದಾರರು ಲಗತ್ತಿಸಿರುವ ವಾಹನದ ಇನ್‌ಶ್ಯೂರೆನ್ಸ್ ಆಧಾರದ ಮೇಲೆ ಸದರಿ ವಾಹನಕ್ಕೆ ರೂ.1,00,000(ಒಂದು ಲಕ್ಷ)ಗಳ ಬೆಲೆಯನ್ನು ನಿಗಧಿಪಡಿಸಿ ಸದರಿ ಮೊತ್ತಕ್ಕೆ ರೂ.50,000(ಐವತ್ತು ಸಾವಿರ)ಗಳನ್ನು ಪ್ರಧಾನ ಅಂಚೆ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ ಇವರಿಂದ ಪಡೆದ ಕಿಸಾನ್ ವಿಕಾಸ್ ಪತ್ರ ಮತ್ತು ಇನ್ನುಳಿದ ರೂ.50,000ಗಳಿಗೆ ಸಮನಾದ ಇಂಡೆಮಿನಿಟಿ ಬಾಂಡ್ ಪಡೆದುಕೊಂಡು ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್‌ಎಂ: 369:2000–01, ದಿ:24–11–01 ರಂದು ಅಂತಿಮ ಆದೇಶವನ್ನು ಕಾಯ್ದಿರಿಸಿ ಷರತ್ತು ಬದ್ಧವಾದ ಆದೇಶವನ್ನು ಹೊರಡಿಸಿ ವಾಹನವನ್ನು ಮಾಲೀಕರ ವಶಕ್ಕೆ ತಾತ್ಕಾಲಿಕವಾಗಿ ಬಿಡುಗಡೆ ಮಾಡಲಾಗಿರುತ್ತದೆ.

ತದನಂತರ ಪ್ರಕರಣದ ವಿಚಾರಣೆಯನ್ನು ಕರೆಯಲಾಗಿದ್ದು, ದಿ:19–8–03, 16–9–03, 16–10–03, 5–12–03, 3–1–04, 13–2–04, 4–3–04ರ ದಿನಾಂಕಗಳಲ್ಲಿ ಅರ್ಜಿದಾರರು ವಕೀಲರೊಂದಿಗೆ ಹಾಗೂ ವಾಹನದೊಂದಿಗೆ ಹಾಜರಾಗಿರುತ್ತಾರೆ. ಈ ಪ್ರಕರಣದಲ್ಲಿ ದಿ:3–1–04ರಂದು ಅಭಿಯೋಜನ ಪರ ಸಾಕ್ಷಿದಾರರಾದ ಶ್ರೀ ಕಾವೇರಪ್ಪ ನವರ ವಿಚಾರಣೆ ನಡೆಸಲಾಗಿರುತ್ತದೆ. ದಿ:18–3–04, 1–2–07ರಂದು ವಾಹನ ಮಾಲೀಕರ ಪರ ವಕೀಲರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:15–2–07ರಂದು ವಾಹನದ ಮಾಲೀಕರು ಮಾತ್ರ ಹಾಜರಾಗಿರುತ್ತಾರೆ. ಆದರೆ ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:12–4–07ರಂದು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:20–12–08, 31–1–09ರಂದು ವಾಹನದ ಮಾಲೀಕರು ಮಾತ್ರ ಹಾಜರಿದ್ದು ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:29–10–09ರಂದು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:1–12–09ರಂದು ವಕೀಲರು ಮಾತ್ರ ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:25–6–11ರಂದು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:26–7–11ರಂದು ವಾಹನದ

ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:22-8-11ರಂದು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು ವಾಹನವನ್ನು ಹಾಜರುಪಡಿಸಿರುವುದಿಲ್ಲ. ತದನಂತರ ದಿ:18-3-04, 1-2-07, 15-2-07, 12-4-07, 20-12-08, 31-1-09, 29-10-09, 24-11-09, 1-12-09, 25-5-11, 25-6-11, 26-7-11, 22-8-11 ದಿನಾಂಕಗಳಲ್ಲಿ ವಾಹನದ ಮಾಲೀಕರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ.

ದಿ:19-2-04ರಂದು ಸ್ವತಂತ್ರ ಸಾಕ್ಷಿದಾರರಾದ ರಾಮಣ್ಣ ರೈ ರವರ ವಿಚಾರಣೆ ನಡೆಸಲಾಗಿರುತ್ತದೆ.

ಅಭಿಯೋಗ ಪರ ಸಾಕ್ಷಿದಾರರಾದ ಪ್ರಾ.ಸಾ.2 ರವರ ವಿಚಾರಣೆ:- ಶ್ರೀ ಜಯರಾಮ್, ಬಿನ್ ಲೇಟ್ ಹೊಂಬಾಳಯ್ಯ, ಪೊಲೀಸ್ ಉಪ ಅಧೀಕ್ಷಕರು, ಸಿ.ಐ.ಡಿ., ಬೆಂಗಳೂರು ಇವರು ಪ್ರಕರಣ ದಾಖಲು ಮಾಡಿದ ಅಧಿಕಾರಿಯಾಗಿದ್ದು, ಇವರು ದಿ:1-12-09ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿದ್ದು, ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತವೆ.

ಮೊದಲನೇ ವಿವಾದಾಂಶ:- ದಿ:8-11-01ರಂದು ಜೀಪ್ ಸಂ:ಕೆಎ-12-ಎಂ-3421ರಲ್ಲಿ ಅಕ್ರಮ ಸಾರಾಯಿ ಪ್ಯಾಕೆಟ್ ಸಾಗಾಣಿಕೆಯಾಗಿದೆಯೇ ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ ಮತ್ತು ನಿಯಮಗಳ ರೀತ್ಯ ಉಲ್ಲಂಘನೆಗೆ ಬಳಸಲಾಗಿದೆಯೇ?

ಎರಡನೇ ವಿವಾದಾಂಶ:- ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನದ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತೆ ಕ್ರಮಗಳನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನದ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ ಅಥವಾ ಇಲ್ಲವೇ?

ಮೂರನೇ ವಿವಾದಾಂಶ:- ಜಪ್ತು ಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ , ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಲು ಕೆಳಕಂಡಂತೆ ಉಲ್ಲೇಖಿಸಲಾಗಿದೆ.

ನಾನು ಜೂನ್-2000ದಿಂದ ಡಿಸೆಂಬರ್-01ರ ವರೆಗೂ ಗೋಣಿಕೊಪ್ಪ ವೃತ್ತದಲ್ಲಿ ಆರಕ್ಷಕ ವೃತ್ತ ನಿರೀಕ್ಷಕನಾಗಿ ಕೆಲಸ ನಿರ್ವಹಿಸಿರುತ್ತೇನೆ. ಪೊನ್ನಂಪೇಟೆ ಪೊಲೀಸ್ ಠಾಣೆ ಗೋಣಿಕೊಪ್ಪ ವೃತ್ತದ ವ್ಯಾಪ್ತಿಯಲ್ಲಿ ಬರುತ್ತದೆ. ದಿ:8-11-01 ರಂದು ರಾತ್ರಿ ನಾನು ಪೊನ್ನಂಪೇಟೆ ಪೊಲೀಸ್ ಠಾಣೆಯಲ್ಲಿದ್ದಾಗ ಸುಮಾರು 8.30ರ ಸಮಯದಲ್ಲಿ ಹಳ್ಳಿಗಟ್ಟು ಗ್ರಾಮದಲ್ಲಿ ಜೀಪಿನಲ್ಲಿ ಅಕ್ರಮವಾಗಿ ನಕಲಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡುತ್ತಿರುವುದಾಗಿ ಬಂದ ಖಚಿತ ವರ್ತಮಾನದ ಮೇರೆಗೆ ನಾನು ನನ್ನ ಜೊತೆಯಲ್ಲಿ ಪೊನ್ನಂಪೇಟೆ ಪೊಲೀಸ್ ಠಾಣೆಯ ಸಹಾಯಕ ಆರಕ್ಷಕ ಉಪ ನಿರೀಕ್ಷಕರಾದ ಶ್ರೀ ಕೆ.ಕೆ.ಉತ್ತಪ್ಪ, ನಂ:131 ಮುಖ್ಯ ಪೇದೆ, ಶ್ರೀ ಕಾವೇರಪ್ಪ-272, ಪೇದೆ ಬೇಬಿ-287, ಪೇದೆ ದಿವಾಕರ ಸಂ:355, ಇವರುಗಳನ್ನು ಕರೆದುಕೊಂಡು ಇಲಾಖಾ ವಾಹನ ಜೀಪ್ ಸಂ:ಕೆಎ-12-ಜಿ-232ರಲ್ಲಿ ಹೋಗಿ ಹಳ್ಳಿಗಟ್ಟು ಗ್ರಾಮದ ಕುಂದ ರಸ್ತೆಯಲ್ಲಿ ಸೀತಾ ಕಾಲೋನಿ ಹತ್ತಿರದ ಕೂಡು ರಸ್ತೆಯಲ್ಲಿ ಬಸ್ ಸ್ಟಾಪ್‌ನಲ್ಲಿ ಪಂಚಾಯಿತಿದಾರರಾದ ರಾಮಣ್ಣ ರೈ, ಹನೀಫ್, ರಂಜು ರವರುಗಳನ್ನು ಬರಮಾಡಿಕೊಂಡು ನಾನು ಮತ್ತು ಸಿಬ್ಬಂದಿಗಳು ಕಾಯುತ್ತಿರುವಾಗ ಪೊನ್ನಂಪೇಟೆ ಕಡೆಯಿಂದ ಒಂದು ಜೀಪ್ ಬಂದಿದ್ದು ಅದನ್ನು ತಡೆದು ನಿಲ್ಲಿಸಿದಾಗ ಒಬ್ಬ ಅಸಾಮಿ ಓಡಿ ಹೋದನು, ಆತನನ್ನು ಹಿಡಿಯಲು ಪ್ರಯತ್ನಿಸಿದಾಗಿಯೂ ಆತ ತಪ್ಪಿಸಿಕೊಂಡನು. ನಾನು ಮತ್ತು ನನ್ನ ಸಿಬ್ಬಂದಿಗಳು ಜೀಪನ್ನು ಸುತ್ತುವರೆದು ಜೀಪಿನ ಒಳಗೆ ಪರಿಶೀಲಿಸಲಾಗಿ ಚಾಲಕನು ಸೇರಿ 4 ಜನರು ಕುಳಿತಿದ್ದು ಜೀಪಿನ ಹಿಂಭಾಗದ ಸೀಟಿನಲ್ಲಿ ನೈಲಾನ್ ಚೀಲಗಳು ಒಟ್ಟು 11 ಇದ್ದು, ಅವುಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಸಾರಾಯಿ ಪ್ಯಾಕೇಟುಗಳು ಇದ್ದಿದ್ದು ಕಂಡುಬಂತು. ಜೀಪಿನಲ್ಲಿ ಇದ್ದವರನ್ನು ಸಾರಾಯಿ ಪ್ಯಾಕೇಟು ಇಟ್ಟುಕೊಳ್ಳುವ ಬಗ್ಗೆ ಸರ್ಕಾರದ ರಹದಾರಿ ಕೇಳಿದಾಗ ಅವರು ತಮ್ಮ ಬಳಿ ಇಲ್ಲವೆಂದು ಹೇಳುತ್ತಿದ್ದುದು, ಇದು ಅಕ್ರಮವಾಗಿ ಸಾರಾಯಿ ಪ್ಯಾಕೇಟುಗಳನ್ನು ಜೀಪಿನಲ್ಲಿ ಸಾಗಾಟ ಮಾಡುತ್ತಿದ್ದುದು ಕಂಡುಬಂದದರಿಂದ ಜೀಪನ್ನು ಪರಿಶೀಲಿಸಲಾಗಿ ಸಂ:ಕೆಎ-12-ಎಂ-3421 ಆಗಿದ್ದು ಜೀಪಿನ ವಿವರವನ್ನು ಮಹಜರಿನಲ್ಲಿ ಬರೆದಿರುತ್ತೇನೆ. ಜೀಪಿನಲ್ಲಿದ್ದ 11 ನೈಲಾನಿನ ಬ್ಯಾಗ್‌ನಲ್ಲಿ ಇದ್ದ ಸಾರಾಯಿ ಪ್ಯಾಕೇಟುಗಳನ್ನು ಲೆಕ್ಕ ಮಾಡಲಾಗಿ 2500 ಪ್ಯಾಕೇಟುಗಳಿದ್ದು, ಪ್ರತಿಯೊಂದು ಚೀಲದಿಂದಲೂ ಒಂದೊಂದು ಪ್ಯಾಕೇಟನ್ನು ಮಾದರಿಯಾಗಿ ತೆಗೆದುಕೊಂಡು ಪ್ರತ್ಯೇಕವಾಗಿ ಅದನ್ನು ಬಿಳಿ ಬಟ್ಟೆಯಿಂದ ಸುತ್ತಿ 'ಜೆ' ಎಂಬ ಅಕ್ಷರದಿಂದ ಸೀಲು ಮಾಡಲಾಯಿತು. ಸದರಿ ಸಾರಾಯಿ ಪ್ಯಾಕೇಟುಗಳ ಮೇಲೆ ಇದ್ದ ಮೊಹರಿನ ವಿವರವನ್ನು ಮಹಜರಿನಲ್ಲಿ ಬರೆದಿರುತ್ತೇನೆ. ನಂತರ ಜೀಪಿನಲ್ಲಿದ್ದ ಆರೋಪಿಗಳ ಹೆಸರುಗಳನ್ನು ವಿಚಾರಿಸಲಾಗಿ ಒಬ್ಬ ಜಯ @ ಕಾರ್ಯಪ್ಪ, ಕೊಳೇರ ಪ್ರಕಾಶ್ @ ಮಂಜಪ್ಪ, ಥೋಮಸ್ @ ಟೋಮಿ, ಜೀಪ್ ಚಾಲಕನ ಹೆಸರು ಸಣ್ಣಪ್ಪ ಎಂದು ತಿಳಿಸಿದರು. ಓಡಿ ಹೋದ ವ್ಯಕ್ತಿಯ ಹೆಸರು ವಿಳಾಸ ತಿಳಿಸಲಾಗಿ ಪುದಿರಮಾಡ ಮುತ್ತು @ ತಮ್ಮಯ್ಯ, ಅಮ್ಮತ್ತಿ ಗ್ರಾಮ, ಹೊಸೂರು ಎಂದು ತಿಳಿಸಿದರು. ಸಾರಾಯಿ ಪ್ಯಾಕೇಟುಗಳ ಬಗ್ಗೆ ವಿಚಾರಿಸಲಾಗಿ ಒಂದು ಅಂಬಾಸಿಡರ್ ಕಾರಿನಲ್ಲಿ ಯಾರೋ ಬಂದು ಕೊಟ್ಟುಹೋದರು ಎಂದು ತಿಳಿಸಿದರು. ಅದರ ಒಟ್ಟು ಮೌಲ್ಯ ಸುಮಾರು ರೂ.25,000(ಇಪ್ಪತ್ತೈದು ಸಾವಿರ)ಗಳ ಬೆಲೆ ಬಾಳುವ ಸಾರಾಯಿ ಪ್ಯಾಕೇಟುಗಳಾಗಿದ್ದವು. ಈ ಮಹಜರನ್ನು ವಾಹನಗಳ ಬೆಳಕಿನಿಂದ 8-14 ಗಂಟೆಯಿಂದ 9-15ಗಂಟೆಯವರೆಗೆ ಬರೆಯಲಾಯಿತು.

ಸದರಿ ಮಹಜರಿನಲ್ಲಿ ಅಮಾನತು ಪಡಿಸಿದ ಸಾರಾಯಿ ಪ್ಯಾಕೇಟು ಮತ್ತು ಸಾಗಾಣಿಕೆ ಮಾಡುತ್ತಿದ್ದ ಜೀಪನ್ನು ಅಮಾನತು ಪಡಿಸಲಾಯಿತು. ಸಾರಾಯಿ ಪ್ಯಾಕೇಟುಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಜೀಪಿನಲ್ಲಿ ಸಿಕ್ಕಿದ 4 ಜನರನ್ನು ದಸ್ತಗಿರಿ ಮಾಡಿಕೊಳ್ಳಲಾಯಿತು.

ರಾತ್ರಿ 10ಗಂಟೆಗೆ ಅಮಾನತು ಪಡಿಸಿದ ಸ್ವೊತ್ತುಗಳನ್ನು ಮತ್ತು ಆರೋಪಿಗಳನ್ನು ಕರೆತಂದು ಒಂದು ವರದಿಯ ಮೂಲಕ ಪೊನ್ನಂಪೇಟೆ ಠಾಣೆಯ ಠಾಣಾಧಿಕಾರಿ ಶ್ರೀ ಬಿ.ಎಸ್.ಚಂದ್ರಶೇಖರ್ ಮುಖ್ಯ ಪೇದೆ-143 ಇವರಿಗೆ ವಹಿಸಿಕೊಟ್ಟನು.

ಮಾದರಿಗಾಗಿ ತೆಗೆದುಕೊಂಡು 11 ಸಾರಾಯಿ ಪ್ಯಾಕೇಟುಗಳನ್ನು ಹಾಗೂ ಅಮಾನತ್ತು ಪಡಿಸಿಕೊಂಡ ಜೀಪನ್ನು ಮತ್ತು ಆರೋಪಿಗಳನ್ನು ನೋಡಿದರೆ ಗುರುತಿಸುತ್ತೇನೆ. ವಶಪಡಿಸಿಕೊಂಡ ಮುದ್ದೆಮಾಲುಗಳಾದ ಸಾರಾಯಿ ಪ್ಯಾಕೇಟುಗಳನ್ನು ಮು.ಮಾ.-1ರಿಂದ 11 ಎಂದು ಗುರುತಿಸಲಾಗಿದೆ ಹಾಗೂ ಜೀಪನ್ನು ನಿಶಾನೆ 'ಪಿ' 12 ಎಂದು ಗುರುತಿಸಲಾಗಿದೆ.

<u>ಪಾಟಿ ಸವಾಲು</u>: ಬಿ.ಎಂ.ಎಸ್.ವಕೀಲರಿಂದ: ನಾನು ಸ್ಥಳಕ್ಕೆ ಹೋದ ನಂತರ ಸಾಕ್ಷಿದಾರರಾದಂತಹ ರಾಮಣ್ಣ ರೈ, ಹನೀಫ, ರಂಜು ಇವರನ್ನು ಬರಮಾಡಿಕೊಂಡೆ. ನಾನು ಆ ಸಮಯದಲ್ಲಿ ಅವರ ಹೇಳಿಕೆ ಏನೂ ಪಡೆದಿಲ್ಲ. ಮಹಜರಿನಲ್ಲಿ ನಾನು ಚೀಲದ ಬಣ್ಣವನ್ನು ಬರೆದಿರುವುದಿಲ್ಲ. ಜೀಪನ್ನು ಕೇಸಿಗಾಗಿ ಸೃಷ್ಟಿ ಮಾಡಿರುತ್ತೇನೆ ಎಂದರೆ ಸುಳ್ಳು. ಈ ಕೇಸಿನಲ್ಲಿ ಅಮಾನತು ಪಡಿಸಿಕೊಂಡ ಜೀಪಿಗೂ ಮತ್ತು ಕೇಸಿಗೂ ಯಾವುದೇ ಸಂಬಂಧವಿಲ್ಲ ಎಂದರೆ ಸುಳ್ಳು.

<u>ಪ್ರಾಸಾ.1</u>:– ಶ್ರೀ ಟಿ.ಎಂ.ಕಾವೇರಪ್ಪ, ಪಿ.ಸಿ–272, ನಾಪೋಕ್ಲು ಠಾಣೆ, ಮುಖ್ಯ ವಿಚಾರಣೆ ಎ.ಡಿ.ಪಿ.ಯವರಿಂದ ದಿ:25–9–1994 ರಿಂದ 6–6–2002ರ ವರೆಗೆ ಪೊನ್ನಂಪೇಟೆ ಠಾಣೆಯಲ್ಲಿ ಕಾಬೀಲನಾಗಿ ಕರ್ತವ್ಯ ನಿರ್ವಹಿಸಿರುತ್ತೇನೆ. ದಿ:8–11–2001ರಂದು ಠಾಣೆಯಲ್ಲಿ ಕರ್ತವ್ಯದಲ್ಲಿ ಇರುವಾಗ್ಗೆ ಆರಕ್ಷಕ ವೃತ್ತ ನಿರೀಕ್ಷಕರು ಗೋಣಿಕೊಪ್ಪದಿಂದ ಠಾಣೆಗೆ ಫೋನ್ ಮಾಡಿ ನಾನು ಬರುತ್ತಾ ಇದ್ದೇನೆ. ಒಂದು ಮಾಹಿತಿ ಇದೆ. ನಾಲ್ಕು ಜನ ಸಿಬ್ಬಂದಿಗಳು ತಯಾರಾಗಿರಬೇಕೆಂದು ತಿಳಿಸಿದರು. 15ನಿಮಿಷ ಕಳೆದು ವೃತ್ತ ನಿರೀಕ್ಷಕರು ಠಾಣೆಗೆ ಬಂದರು. ಎ.ಎಸ್.ಐ. ಕೆ.ಕೆ.ಉತ್ತಪ್ಪ, ಹೆಚ್.ಸಿ.131, ಬಿ.ಜಿ.ಸೋಮಯ್ಯ, ಪಿಸಿ287, ಟಿ.ಬೇಬಿ, ಪಿ.ಸಿ.255ರ ಎಸ್.ಎಸ್.ದಿವಾಕರ ಹಾಗೂ ನನ್ನನ್ನು ಕರೆದುಕೊಂಡು ಕುಂದಾ ರಸ್ತೆ ಕಡೆಗೆ ಕರೆದುಕೊಂಡು ಇಲಾಖಾ ಜೀಪಿನಲ್ಲಿ ಹೋದರು. ಆ ಸಂದರ್ಭದಲ್ಲಿ ಎರಡು ಜನ ಸಾಕ್ಷಿದಾರರನ್ನು ಕೂಡ ಜೀಪಿನಲ್ಲಿ ಕರೆದುಕೊಂಡು ಪಹರೆ ಕಾಯುತ್ತಾ ಇರುವಾಗ ಸುಮಾರು ರಾತ್ರಿ 8.00ಗಂಟೆ ಹೊತ್ತಿಗೆ ಕುಂದಾ ರಸ್ತೆಯಲ್ಲಿ ನಮಗೆ ಎದುರಾಗಿ ಒಂದು ವಾಹನ ಬಂದಿತು. ಅದನ್ನು ವೃತ್ತ ನಿರೀಕ್ಷಕರು ನಿಲ್ಲಿಸಲು ಸೂಚಿಸಿದಾಗ ವಾಹನ ನಿಂತಿತು. ಸದರಿ ಜೀಪಿನಲ್ಲಿ ಚಾಲಕ ಸೇರಿ ನಾಲ್ಕು ಜನರು ಇದ್ದರು, ಜೀಪನ್ನು ಸುತ್ತುವರಿದು ಪರಿಶೀಲಿಸಿದಾಗ ಜೀಪಿನೊಳಗಡೆ 2500 ಸಾರಾಯಿ ಪ್ಯಾಕೇಟುಗಳನ್ನು ಪ್ಲಾಸ್ಟಿಕ್ ಚೀಲದಲ್ಲಿ ತುಂಬಿರುವುದು ಕಂಡುಬಂತು ಅವುಗಳನ್ನು ಪರಿಶೀಲಿಸಿ ನೋಡಲಾಗಿ ಒಟ್ಟು 2500x100 ಸಾರಾಯಿ ತುಂಬಿದ ಪ್ಯಾಕೇಟುಗಳು ಇದ್ದವು. ಸದರಿ ಪ್ಯಾಕೇಟುಗಳನ್ನು ಸಾಗಿಸಲು ರಹದಾರಿ ವಿಚಾರ ಮಾಡಿದಾಗ ಯಾವುದೇ ರಹದಾರಿ ಇಲ್ಲವೆಂದು ಆ ನಾಲ್ಕು ಜನರು ತಿಳಿಸಿದರು. ಸದರಿ ಸಾರಾಯಿ ಪ್ಯಾಕೇಟುಗಳನ್ನು ಅಕ್ರಮ ಸಾಗಾಣಿಕೆ ಎಂದು ತೀರ್ಮಾನಿಸಿ ಸ್ಥಳದಲ್ಲಿ ಮಹಜರು ಬರೆದು ಸೀಲು ಮಾಡಿ ವಶಕ್ಕೆ ತೆಗೆದುಕೊಂಡೆವು. ಸದರಿ ಪ್ಯಾಕೇಟುಗಳ ಬೆಲೆ ರೂ.25,000/–ಗಳೆಂದು ಅಂದಾಜು ಮಾಡಲಾಯಿತು. ಸದರಿ ಜೀಪಿನಲ್ಲಿದ್ದ ವ್ಯಕ್ತಿಗಳ ಹೆಸರು ವಿಳಾಸ ವಿಚಾರಿಸಲಾಗಿ ಒಬ್ಬ ಪಾಲಂದಿರ ಜಯ, ಇನ್ನೊಬ್ಬ ಕೊಳೇರ ಪ್ರಕಾಶ ಮತ್ತೊಬ್ಬ ಟಾಮಿ, ಮರಪಾಲ ವಾಸಿ, ಪೊನ್ನಚ್ಚನ ಸಣ್ಣಪ್ಪ, ಸದರಿ ಜೀಪ್ ಕಮಾಂಡರ್ ಜೀಪ್ ಆಗಿದ್ದು ಅಂದಾಜು ರೂ.1,00,000(ಒಂದು ಲಕ್ಷ)ಗಳ ಬೆಲೆ ಬಾಳುವಂತಾಗಿತ್ತು. ಆ ದಿವಸ ಮಹಜರಿನಲ್ಲಿ ಬರೆದ ಸಹಿಯನ್ನು ಗುರುತಿಸುತ್ತೇನೆ. ಸದರಿ ಜೀಪನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದನ್ನು ನೋಡಿ ಗುರುತಿಸುತ್ತೇನೆ. ಅದನ್ನು ಎಂ.ಒ.1 ಎಂದು ಗುರುತಿಸಲಾಯಿತು. ಆ ದಿವಸ ವಶಪಡಿಸಿಕೊಂಡ 2500 ಪ್ಯಾಕೇಟುಗಳನ್ನು ಮತ್ತು ದಸ್ತಗಿರಿ ಮಾಡಿದ 4 ವ್ಯಕ್ತಿಗಳನ್ನು ನೋಡಿದರೆ ಗುರುತಿಸುತ್ತೇನೆ.

<u>ಪಾಟಿ ಸವಾಲು</u>:– ಎಂಪಿಟಿ ವಕೀಲರಿಂದ:–ಸ್ಥಳದಲ್ಲಿ ಯಾರು ಮಹಜರು ಬರೆದಿರುತ್ತಾರೆಂದು ಈಗ ನೆನಪಿಲ್ಲ. ಆ ದಿವಸ ವೃತ್ತ ನಿರೀಕ್ಷಕರು ಠಾಣೆಗೆ ಫೋನು ಮಾಡಿದಾಗ ರಾತ್ರಿ 7.30ಗಂಟೆ ಆಗಿತ್ತು. ಸಾಕ್ಷಿದಾರರನ್ನು ವೃತ್ತ ನಿರೀಕ್ಷಕರೇ ಜೀಪಿನಲ್ಲಿ ಕರೆದುಕೊಂಡು ಬಂದಿದ್ದರು. ಪೊನ್ನಂಪೇಟೆ ಠಾಣೆಯಿಂದ ನಾವು ಪಾರ ಕಾಯುತ್ತಿದ್ದ ಸ್ಥಳಕ್ಕೆ ಸುಮಾರು 3ಕಿ.ಮೀ.ಆಗಿರುತ್ತದೆ. ಆ ಸ್ಥಳದಲ್ಲಿ ಸುಮಾರು ಕಾಲು ಗಂಟೆ ಕಾದು ಕುಳಿತ್ತಿದ್ದಿರಬಹುದು. ನಾವು ಕಾದು ಕುಳಿತ ಸ್ಥಳದಿಂದ 20 ಅಡಿ ದೂರದಲ್ಲಿ ಮೂರು ಮನೆಗಳು ಎರಡು ಅಂಗಡಿಗಳು ಇವೆ ಅಂದರೆ ನಿಜ. ಆ ಜಾಗದ ಅಕ್ಕ ಪಕ್ಕದವರನ್ನು ಮಹಜರಿಗೆ ಕರೆತಂದು ಸಹಿ ಹಾಕಿಸಲು ಯಾವುದೇ ತೊಂದರೆನು ಇಲ್ಲ. ಆದರೆ ಜೀಪಿನಲ್ಲಿ ಸಾಕ್ಷಿಗಳು ಇದ್ದರು ಎಂದು ಪಾಟಿ ಸವಾಲು ಹೇಳುತ್ತಾರೆ. ಆ ಸಾಕ್ಷಿಗಳು ಪೊನ್ನಂಪೇಟೆ ಠಾಣೆಯಿಂದ 10ಕಿಮೀ. ದೂರದ ನಿವಾಸಿಗಳು ಅಂದರೆ ನನಗೆ ಗೊತ್ತಿಲ್ಲ. ವಶಪಡಿಸಿಕೊಂಡ ಸಾರಾಯಿ ಪ್ಯಾಕೇಟುಗಳಿಗೂ ಕಮಾಂಡರು ಜೀಪಿಗೂ ಯಾವುದೇ ಸಂಬಂಧ ಇಲ್ಲ ಅಂದರೆ ಸರಿಯಲ್ಲ. ನನ್ನ ಮೇಲಾಧಿಕಾರಿಗಳಿಗೆ ಸಹಾಯ ಮಾಡಲು ಸುಳ್ಳು ಹೇಳುತ್ತಿದ್ದೇನೆ ಎಂಬುದು ಸರಿ ಅಲ್ಲ. ಮಹಜರನ್ನು ಸ್ಥಳದಲ್ಲಿ ಬರೆದಿಲ್ಲ. ಠಾಣೆಯಲ್ಲಿ ಕುಳಿತು ಬರೆದಿರುತ್ತೇನೆ ಅಂದರೆ ಸರಿ ಅಲ್ಲ. ಜೀಪಿನ ಮೇಲೆ ಸುಳ್ಳು ಪ್ರಕರಣ ದಾಖಲು ಮಾಡಿರುತ್ತೇವೆ ಅನ್ನುವುದು ಸರಿಯಲ್ಲ. ನೀವು ಹೇಳಿದಂತೆ ಯಾವುದೇ ಘಟನೆ ನಡೆದಿಲ್ಲ ಅನ್ನುವುದು ಸರಿಯಲ್ಲ.

**<u>ಪ್ರಾ.ಸಾ.5</u>**: ಕೆ.ಕೆ.ಉತ್ತಪ್ಪ ಇವರ ಮುಖ್ಯ ವಿಚಾರಣೆ ಎ.ಡಿ.ಪಿ.ಯವರಿಂದ :–2001–02ರ ವರೆಗೆ ಪೊನ್ನಂಪೇಟೆ ಪೊಲೀಸ್ ಠಾಣೆಯಲ್ಲಿ ಎ.ಎಸ್.ಐ.ಆಗಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:8–11–01ರಂದು ರಾತ್ರಿ 8.30ಗಂಟೆಗೆ ಠಾಣಾ ಪಿ.ಎಸ್.ಐ.ಗಣೇಶ್ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ನಾನು ಹೆಚ್.ಸಿ.131, ಪಿಸಿ.272, ಪಿಸಿ.255, ಪಿಸಿ.287 ರವರೊಂದಿಗೆ ಇಲಾಖಾ ವಾಹನ ಕೆಎ–12–ಜಿ–232ರಲ್ಲಿ ಹಳ್ಳಿಗಟ್ಟು ಗ್ರಾಮಕ್ಕೆ ಬಂದು ಬಸ್ಸು ತಂಗುದಾಣದ ಬಳಿ ಕಾಯುತ್ತಿರುವಾಗ ಪೊನ್ನಂಪೇಟೆ ಕಡೆಯಿಂದ ಕೆಎ–12–ಎಂ–3421ರ ಬೂದು ಬಣ್ಣದ ಜೀಪು ಬರುತ್ತಿರುವುದನ್ನು ಗಮನಿಸಿ ಸದರಿ ಜೀಪನ್ನು ತಡೆದು ನಿಲ್ಲಿಸಿದಾಗ ಜೀಪಿನಲ್ಲಿದ್ದ ಚಾಲಕ ಸೇರಿ 5 ಜನ ಇದ್ದು ಅವರ ಪೈಕಿ ಒಬ್ಬ ವಾಹನದಿಂದ ಇಳಿದು ನಮ್ಮ ಕೈಗೆ ಸಿಗದೆ ಓಡಿ ಹೋಗುವಾಗ ಆತನನ್ನ ಹಿಡಿಯಲು ಬೆನ್ನು ಹತ್ತಿದ್ದು, ಆತನು ನಮ್ಮ ಕೈಗೆ ಸಿಗದೆ ತಪ್ಪಿಸಿಕೊಂಡು ಓಡಿಹೋಗಿರುತ್ತಾನೆ.

ಜೀಪನ್ನು ಸುತ್ತುವರಿದು ಪರಿಶೀಲಿಸಿದಾಗ ಜೀಪಿನ ಹಿಂದಿನ ಭಾಗದಲ್ಲಿ ಬಿಳಿ ಬಣ್ಣದ 11 ನೈಲಾನಿನ ಏನೋ ತುಂಬಿದ ಚೀಲಗಳಿದ್ದು, ಚೀಲಗಳನ್ನು ಬಿಚ್ಚಿ ಪರಿಶೀಲಿಸಿದಾಗ ಅದರಲ್ಲಿ 100 ಎಂ.ಎಲ್.ನ 2500 ಸಾರಾಯಿ ಸ್ಯಾಚೆಟ್‌ಗಳು ಇರುವುದು ಕಂಡುಬಂತು. ಸದರಿ ಸಾರಾಯಿ ಸ್ಯಾಚೆಟುಗಳನ್ನು ಸಾಗಾಣಿಕೆ ಮಾಡಲು ಸೆರೆಸಿಕ್ಕ ಅಸಾಮಿಗಳಲ್ಲಿ ಕೇಳಲಾಗಿ ಅವರು ಯಾವುದೂ ಇಲ್ಲವೆಂದು ತಿಳಿಸಿದರು. ಆ ಕಾರಣದಿಂದ ಇದು ಮದ್ಯದ ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಸದರಿ ಸಾರಾಯಿಯನ್ನು ಮಾರಾಟ ಮಾಡಲು ಸಾಗಾಣಿಕೆ ಮಾಡುತ್ತಿದ್ದಾರೆಂದು ಪರಿಗಣಿಸಿ ಸ್ವತಂತ್ರ ಪಂಚರನ್ನು ಸ್ಥಳಕ್ಕೆ ಬರಮಾಡಿಕೊಂಡು ಎಲ್ಲಾ ಚೀಲಗಳಲ್ಲಿದ್ದ ಒಂದೊಂದು ಪ್ಯಾಕೆಟುಗಳನ್ನು ರಾಸಾಯನಿಕ ಮಾದರಿಗಾಗಿ ತೆಗೆದು ಅವುಗಳ ಮೇಲೆ ಬಿಳಿ ಬಟ್ಟೆಯಿಂದ ಸುತ್ತಿ ದಾರದಿಂದ ಹೊಲಿದು 'ಜೆ' ಎಂಬ ಅಕ್ಷರದಿಂದ ಮುದ್ರೆ ಒತ್ತಿ ಒಟ್ಟು 2500 ಸಾರಾಯಿ ಪ್ಯಾಕೆಟುಗಳನ್ನು ಹಾಗೂ ವಾಹನವನ್ನು ಸರ್ಕಾರದ ಪರ ಮಹಜರಿನಡಿಯಲ್ಲಿ ಅಮಾನತು ಪಡಿಸಲಾಯಿತು. ಸೆರೆ ಸಿಕ್ಕ ಅಸಾಮಿಗಳ ಹೆಸರು ವಿಳಾಸ ಕೇಳಲಾಗಿ ಕೊಳೇರ ಪ್ರಕಾಶ, ಥೋಮಸ್, ಚಾಲಕ ಪೊನ್ನಪ್ಪ, ಉಳಿದ ಅಸಾಮಿಯ ಹೆಸರು ನೆನಪಿಲ್ಲ. ಓಡಿಹೋದ ಅಸಾಮಿಯ ಹೆಸರು ಮುತ್ತು ಎಂದು ತಿಳಿದುಬಂತು. ಸದರಿ ವಾಹನದ ಮುಂಭಾಗದ ಬಾನೆಟ್ ಮೇಲೆ 'ಪಿಪಿಎಸ್' ಎಂದು ಠಾಣಾ ಗುನ್ಹೆ ಸಂಖ್ಯೆಯನ್ನು ಬರೆದು ಅಂಟಿಸಲಾಯಿತು. ಮಹಜರಿಗೆ ನಾನು ಸಹಿ ಮಾಡಿರುತ್ತೇನೆ. ಈ ಹಂತದಲ್ಲಿ ಕಡತವನ್ನು ಪರಿಶೀಲಿಸಲಾಗಿ ಅದು ಜೆರಾಕ್ಸ್ ಪ್ರತಿಯಾಗಿದ್ದು, ಅರ್ಜಿದಾರರ ಪರ ವಕೀಲರು ಸದರಿ ಮಹಜರನ್ನು ಗುರುತಿಸಲು ತಕರಾರು ಮಾಡಿದ್ದು, ಅದರ

ದೃಢೀಕೃತ ಯಥಾ ನಕಲನ್ನು ಹಾಜರುಪಡಿಸಲು ಆ ದಿನ ಅಮಾನತು ಪಡಿಸಿದ ವಾಹನವನ್ನು ನೋಡಿದರೆ ಗುರುತಿಸುತ್ತೇನೆಂದು ಹೇಳಿದ್ದು, ಅರ್ಜಿದಾರರ ವಕೀಲರು ಪ್ರಾಧಿಕಾರದ ಮುಂದೆ ಹಾಜರಿದ್ದು, ಸದರಿ ವಾಹನವನ್ನು ಮುಂದಿನ ಮುದ್ದತ್ತಿನಂದು ಹಾಜರುಪಡಿಸಲು ಸಮಯಾವಕಾಶ ಕೋರಿದ್ದು, ಕಾಲಾವಕಾಶ ನೀಡಲಾಯಿತು.

ಈ ನ್ಯಾಯಾಲಯದಿಂದ ದಿ:22–8–11ರಂದು ವಾಹನ ಮಾಲೀಕರಿಗೆ ದಿ:12–9–11ರಂದು ವಾಹನದೊಂದಿಗೆ ಹಾಜರಾಗಲು ಸಮನ್ಸ್‌ನ್ನು ಆರ್‌ಪಿಎಡಿ ಮೂಲಕ ಕಳುಹಿಸಿದ್ದು ಸ್ವೀಕೃತಿ ಬಂದಿರುತ್ತದೆ. ಆದರೆ ದಿ:12–9–11ರಂದು ಮಾಲೀಕರ ಪರ ವಕೀಲರು ಹಾಜರಿದ್ದು, ವಾಹನವನ್ನು ಹಾಜರುಪಡಿಸಲು ವಿಫಲರಾಗಿದ್ದು ವಕೀಲರ ಕೋರಿಕೆಯನ್ನು ಪರಿಗಣಿಸಿ ಅದೇ ದಿನದಂದು ಅಂದರೆ ದಿ:12–9–11ರಂದು ವಿಚಾರಣೆಯನ್ನು ದಿ:26–9–11ಕ್ಕೆ ನಿಗಧಿಪಡಿಸಲಾಗಿತ್ತು. ವಾಹನದ ಮಾಲೀಕರು ದಿ:24–11–01ರಂದು ನೀಡಿರುವ ಆದೇಶದಲ್ಲಿನ ಷರತ್ತುಗಳನ್ನು ಪಾಲಿಸದೇ ವಾಹನವನ್ನು ನ್ಯಾಯಾಲಯಕ್ಕೆ ಹಾಜರುಪಡಿಸದೇ ಷರತ್ತು ಉಲ್ಲಂಘನೆ ಮಾಡಿರುತ್ತಾರೆ. ವಾಹನದ ಮಾಲೀಕರ ಕೋರಿಕೆಯಂತೆ ವಾಹನವನ್ನು ಹಾಜರುಪಡಿಸಲು ಸಮಯಾವಕಾಶ ಕೋರಿದ್ದರೂ, ದಿ:26–9–11ರಂದು ಅರ್ಜಿದಾರರಾದ ಶ್ರೀಮತಿ ಶೈನಿ ಸಿ.ಪೌಲ್ ಕೋಂ ಸಿ.ಟಿ.ಪೌಲ್, ಬಿಳೂರು ಗ್ರಾಮ, ಪೊನ್ನಪ್ಪಸಂತೆ ಅಂಚೆ, ವಿರಾಜಪೇಟೆ ತಾಲ್ಲೂಕು ಇವರಾಗಲೀ ಅವರ ಪರ ವಕೀಲರಾಗಲಿ ಹಾಜರಾಗಿರುವುದಿಲ್ಲ. ಸದರಿ ದಿನಾಂಕದಂದು ಅಭಿಯೋಗ ಪರ ಸಾಕ್ಷಿದಾರರಾದ ಕೆ.ಕೆ.ಉತ್ತಪ್ಪ, ಆರಕ್ಷಕ ಸಹಾಯಕ ಉಪ ನಿರೀಕ್ಷಕರು ರವರ ಹಾಗೂ ಮಹಜರು ಸಾಕ್ಷಿದಾರರಾದ ಕೆ.ಯು.ಹನೀಫ್, ಪೊನ್ನಂಪೇಟೆ ರವರ ವಿಚಾರಣೆ ನಡೆಸಲಾಗಿರುತ್ತದೆ. ಅಭಿಯೋಗ ಪರವಾಗಿ ನಡೆಸಲಾಗಿರುವ ವಿಚಾರಣೆಯಲ್ಲಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೆಟುಗಳು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸಾಭೀತಾಗಿರುತ್ತದೆ. ಈ ಬಗ್ಗೆ ವಾಹನದ ಮಾಲೀಕರಿಗೆ ಅಬಕಾರಿ ಕಾನೂನಿನ ಅರಿವಿದ್ದು, ತನ್ನ ಸ್ವಂತ ಲಾಭಕ್ಕಾಗಿ ಸರ್ಕಾರಕ್ಕೆ ವಂಚನೆ ಮಾಡುವ ನೆಪದಲ್ಲಿ ಈ ಕೃತ್ಯವೆಸಗಿರುವುದು ಕಂಡುಬಂದಿರುತ್ತದೆ.

ಮೇಲಿನ ದಿನಾಂಕಗಳಲ್ಲಿ ಹಾಗೂ ಅರ್ಜಿದಾರರ ಪರ ವಕೀಲರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸೂಚಿಸಿದ್ದರೂ ಕೂಡ ಇವರು ನ್ಯಾಯಾಲಯದ ಅಧಿಕೃತ ಅಧಿಕಾರಿಗಳ ಆದೇಶವನ್ನು ಉಲ್ಲಂಘನೆ ಮಾಡಿರುವುದಲ್ಲದೆ ದಿ:24–11–01ರ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದು ಪ್ರಾಧಿಕಾರದಲ್ಲಿ ಕಂಡುಬಂದಿದ್ದು ವಾಹನದ ಮಾಲೀಕರಿಗೆ ವಾಹನವನ್ನು ಹಾಜರುಪಡಿಸಲು ಸಾಕಷ್ಟು ಅವಕಾಶವನ್ನು ನೀಡಿದ್ದರೂ ವಿಫಲರಾಗಿದ್ದು, ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುವುದರಿಂದ ಸಹಾಯಕ ಅಭಿಯೋಜಕರೊಂದಿಗೆ ವಾದ ವಿವಾದಗಳನ್ನು ನಡೆಸಿ ಮಧ್ಯಂತರ ಬಿಡುಗಡೆಯ ಸಮಯದಲ್ಲಿ ವಾಹನದ ಮಾಲೀಕರು ನೀಡಿರುವ ಕಿಸಾನ್ ವಿಕಾಸ್ ಪತ್ರದ ಅವಧಿಯು ಪೂರ್ಣಗೊಂಡಿದ್ದು, ಅದರ ಮೌಲ್ಯ ರೂ.1,00,000(ಒಂದು ಲಕ್ಷ)ಗಳಾಗಿರುತ್ತದೆ. ಆದುದರಿಂದ ವಾಹನದ ಮೌಲ್ಯಕ್ಕೆ ಸಮನಾದ ಮೊತ್ತ ರೂ.1,00,000(ಒಂದು ಲಕ್ಷ)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ನ್ಯಾಯಾಲಯದಲ್ಲಿ ಅಭಿಯೋಗ ನಿರ್ದೇಶಕರು ವಾದಿಸಿರುತ್ತಾರೆ. ಮೇಲಿನ ಎಲ್ಲಾ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ವಾಹನದ ಮಾಲೀಕರು ವಾಹನದ ಮೌಲ್ಯಕ್ಕೆ ಸಮನಾದ ಮೊತ್ತಕ್ಕೆ ನೀಡಿರುವ ಭದ್ರತೆ ಕಿಸಾನ್ ವಿಕಾಸ್ ಪತ್ರ ಸಂ:OOGG 645429, ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್‌ಎಂ:369:2001–02, ದಿ:30–9–2011.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ವೃತ್ತ ನಿರೀಕ್ಷಕರು, ಪೊನ್ನಂಪೇಟೆ ರವರ ಪ್ರ.ವ.ವ.ಸಂ:209/01, ದಿ:08–11–01ರಲ್ಲಿ ವಶಪಡಿಸಿಕೊಂಡ ವಾಹನವನ್ನು ನ್ಯಾಯಾಲಯಕ್ಕೆ ಹಾಜರುಪಡಿಸದೇ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ವಾಹನಕ್ಕೆ ಸಮನಾದ ಮೌಲ್ಯ ದಿ:24–11–01ರಂದು ನೀಡಿರುವ ಕಿಸಾನ್ ವಿಕಾಸ್ ಪತ್ರದ ಮೊತ್ತ ರೂ. 1,00,000 (ಒಂದು ಲಕ್ಷ)/–ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:30–9–11ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಪಿ.ಆರ್.ನಂ. 1112 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/05/2010–11, ದಿನಾಂಕ: 14/09/2011**

**ಉಪಸ್ಥಿತರು:– ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.**

| **ಪಿರ್ಯಾದುದಾರರು:–** | **–ವಿರುದ್ದ–** | **ಆರೋಪಿ:–** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಚಿಂತಾಮಣಿ ಉಪ ವಿಭಾಗ,<br>ಚಿಂತಾಮಣಿ. | | 1. ಮುನಿವೆಂಕಟಪ್ಪ ಬಿನ್ ನಾರಾಯಣಪ್ಪ, ಕರೇನಾಹಳ್ಳಿ, ಕೋಲಾರ ತಾಲ್ಲೂಕು.<br>2. ಕುಮಾರ್ ಬಿನ್ ಕೃಷ್ಣಯ್ಯ, ಅನ್ಸರ್ ಬಿಲ್ಡಿಂಗ್, ಟ್ಯಾಂಕ್ ಬಂಡೆ ರಸ್ತೆ, ಚಿಂತಾಮಣಿ ನಗರ.<br>3. ಅನಿಲ್ ಬಿನ್ ಮಹದೇವಪ್ಪ, ಅನ್ಸರ್ ಬಿಲ್ಡಿಂಗ್, ಟ್ಯಾಂಕ್ ಬಂಡೆ ರಸ್ತೆ, ಚಿಂತಾಮಣಿ ನಗರ.<br>4. ಶಶಿಕುಮಾರ್ ಬಿನ್ ಕದಿರಪ್ಪ, ಮುನ್ನಾರ್ ಗ್ರಾಮ, ಕೊಳ್ಳೆಗಾಲ ತಾಲ್ಲೂಕು.<br>5. ಪಿ.ಎನ್. ವೆಂಕಟರೆಡ್ಡಿ ಬಿನ್ ಚಿಕ್ಕನಾರಾಯಣ, ಅಂಜನಿ ಬಡಾವಣೆ, ಚಿಂತಾಮಣಿ ಟೌನ್ & ತಾ॥ |

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ:12/07/2010 ರಂದು ಬೆಳಿಗ್ಗೆ 10–00 ಗಂಟೆ ಸಮಯದಲ್ಲಿ ಬಂದ ವರ್ತಮಾನ ಮೇರೆಗೆ ಚಿಂತಾಮಣಿ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರು ಸಿಬ್ಬಂದಿಯೊಂದಿಗೆ ಬೆಂಗಳೂರು–ಚಿಂತಾಮಣಿ ರಾಜ್ಯ ಹೆದ್ದಾರಿ (ಚಿನ್ನಸಂದ್ರ ಗ್ರಾಮ) ಯಲ್ಲಿ ರಸ್ತೆಕಾವಲು ನಡೆಸುತ್ತಿರುವ ಸಮಯದಲ್ಲಿ ಟಿ.ವಿ.ಎಸ್. ಎಕ್ಸ್‌ಎಲ್ ದ್ವಿಚಕ್ರವಾಹನದಲ್ಲಿ ಬಿಳಿ ಬಣ್ಣದ ಪಾಲಿಥಿನ್ ಚೀಲವನ್ನು ಇಟ್ಟುಕೊಂಡು ಬರುತ್ತಿರುವುದನ್ನು ನೋಡಿ ಸದರಿ ದ್ವಿಚಕ್ರ ವಾಹನವನ್ನು ತಡೆದು ಪರಿಶೀಲಿಸಲಾಗಿ ವಾಹನದ ಸಂ:ಕೆಎ–40 ಎಲ್–5509 ಆಗಿದ್ದು, ವಾಹನದಲ್ಲಿ 180 ಎಂ.ಎಲ್. X 56 ಬಾಟಲಿಗಳಿದ್ದ 10 ಲೀ. ವಿವಿಧ ಬಗೆಯ ಮದ್ಯದ ವಿವರಗಳು ಭಾರತೀಯ ತಯಾರಿಕೆ ಮದ್ಯ ಇದ್ದು, ಈ ಮದ್ಯ ಸಾಗಾಣಿಕೆ ಬಗ್ಗೆ ಆರೋಪಿಯಾದ ಮುನಿವೆಂಕಟಪ್ಪ ರವರನ್ನು ವಿಚಾರಿಸಲಾಗಿ, ಆತನು ತನ್ನ ಬಳಿ ಯಾವುದೇ ರಹದಾರಿ ಪತ್ರಗಳು ಇಲ್ಲವೆಂದು ತಿಳಿಸಿರುತ್ತಾರೆ. ವಾಹನ ಮತ್ತು ದಾಸ್ತಾನನ್ನು ವಶಪಡಿಸಿಕೊಂಡು ಈ ಬಗ್ಗೆ ತಕ್ಸೀರು ಸಂ:01/2010–11 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ನಂತರ ವಾಹನ ಮತ್ತು ಮದ್ಯವನ್ನು ಅಬಕಾರಿ ನಿರೀಕ್ಷಕರು, ಚಿಂತಾಮಣಿ ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಅಬಕಾರಿ ನಿರೀಕ್ಷಕರು, ಚಿಂತಾಮಣಿ ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಮದ್ಯದಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:3872/2010, ದಿನಾಂಕ:21/07/2010 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ ಕ್ರಮವಾಗಿ $25.2^0$ & $25.6^0$ ಯು.ಪಿ. ಇದ್ದು, ಇದರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ ರವರ ಪತ್ರ ದಿನಾಂಕ:04/08/2011 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 10.000 ಲೀ. ರಾಜಾ ವಿಸ್ಕಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾಧಿಕಾರಿಗಳು ವರದಿ ಸಲ್ಲಿಸಿದ್ದು, ಅದರಂತೆ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 10.000 ಲೀ. ಮದ್ಯವನ್ನು ದಿನಾಂಕ;12/04/2011 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಮದ್ಯವನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಈ ಪ್ರಕರಣದಲ್ಲಿ ಜಪ್ತುಪಡಿಸಿದ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–5509 ರ ಮಾಲೀಕತ್ವದ ಬಗ್ಗೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರಿಗೆ ಈ ಪ್ರಾಧಿಕಾರದಿಂದ ಪತ್ರ ಬರೆದಿದ್ದು, ಅದರಂತೆ ಸಾರಿಗೆ ಅಧಿಕಾರಿಗಳ "ಬಿ" ವಹಿಯ ಪ್ರಕಾರ ಸದರಿ ವಾಹನದ ನೊಂದಣಿಯ ಮಾಲೀಕರೆಂದು ವರದಿ ಮಾಡಿರುವ ಹಿನ್ನೆಲೆಯಲ್ಲಿ ಪಿ.ಎನ್. ವೆಂಕಟರೆಡ್ಡಿ ಬಿನ್ ಚಿಕ್ಕನಾರಾಯಣ, ಅಂಜನಿ ಬಡಾವಣೆ, ಚಿಂತಾಮಣಿ ಟೌನ್ & ತಾಲ್ಲೂಕು ಇವರಿಗೆ ದಿನಾಂಕ:11/04/2011 ರಂದು ಪ್ರಾಧಿಕಾರದಿಂದ ಆರ್.ಪಿ.ಎ.ಡಿ. ಮೂಲಕ ಕಾರಣ ಕೇಳಿ ನೋಟೀಸ್‌ನ್ನು ರವಾನಿಸಿದ್ದು, ನೋಟೀಸ್‌ನ್ನು ಮಾಲೀಕರು ಪಡೆದ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ. ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ ಇವರ ಪತ್ರದಲ್ಲಿ ಸದರಿ ವಾಹನ ತನ್ನದೆಂದು ಆರೋಪಿಯಾಗಲೀ ಅಥವಾ ವಾಹನ ಮಾಲೀಕರಾಗಲೀ ಇಲ್ಲಿಯವರೆವಿಗೂ ವಾಹನದ ಮೂಲ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆ ಬಗ್ಗೆ ಮನವಿ ಸಲ್ಲಿಸಿರುವುದಿಲ್ಲ. ಸದರಿ ವಾಹನವನ್ನು ಜಪ್ತುಪಡಿಸಿ ಒಂದು ವರ್ಷ ಕಳೆದರೂ ಸಹ ವಾಹನ ತಮ್ಮದೆಂದು ಯಾರೂ ಮುಂದೆ ಬಾರದ ಕಾರಣ ಈ ವಾಹನವನ್ನು ವಾರಸುದಾರರು ಇಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:14/09/2011 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರ.ಮಾ.ವ. ಮಹಜರ್‌ನ್ನು ಪರಿಶೀಲಿಸಲಾಗಿ ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ ರವರು ದಿನಾಂಕ:12/07/2010 ರಂದು ಚಿನ್ನಸಂದ್ರ ಗ್ರಾಮದ ವ್ಯಾಪ್ತಿಯಲ್ಲಿ ಗಸ್ತು ನಡೆಸುತ್ತಿರುವಾಗ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–5509 ರ ವಾಹನದಲ್ಲಿ 10.000 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಮದ್ಯದಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಹಾಗೂ ಈ ವಾಹನ ತನ್ನದೆಂದು ಕೋರಿ ಯಾರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ ಇವರ ಶಿಫಾರಸ್ಸಿನಂತೆ ಈ ಕೆಳಕಂಡ ಆದೇಶ

**ಆದೇಶ**

ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು(ಪ್ರಭಾರ), ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಿ ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ ರವರ ದಿನಾಂಕ:12/07/2010 ರ ಪ್ರ.ಮಾ.ವ.ಸಂಖ್ಯೆ 01/2010 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–5509 ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:14/09/2011 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಬಾಲಗಂಗಾಧರ ಹೆಚ್.ಬಿ.,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು(ಪ್ರಭಾರ),
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

ಪಿ.ಆರ್.ನಂ. 1168

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/59/2010–11, ದಿನಾಂಕ:14/09/2011.**

**ಉಪಸ್ಥಿತರು:– ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು(ಪ್ರಭಾರ), ಚಿಕ್ಕಬಳ್ಳಾಪುರ ಜಿಲ್ಲೆ.**

**ಫಿರ್ಯಾದುದಾರರು:–**
ಆರಕ್ಷಕ ಉಪ ನಿರೀಕ್ಷಕರು,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ,
ಚಿಕ್ಕಬಳ್ಳಾಪುರ.

**ಆರೋಪಿ/ ಅರ್ಜಿದಾರರು:–**
ಶೀನಪ್ಪ ಬಿನ್ ಮಂಡಿ ವೆಂಕಟರಾಯಪ್ಪ,
ಗರುಡಚಾರ್ಲಹಳ್ಳಿ, ಗುಡಿಬಂಡೆ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ:21/09/2010 ರಂದು ಪಿರ್ಯಾದುದಾರರಿಗೆ ಬಂದ ಖಚಿತ ಬಾತ್ಮೀಯ ಮೇರೆಗೆ ಸರ್ಕಾರಿ ವಾಹನ ನೊಂದಣಿ ಸಂ:ಕೆಎ–40 ಜಿ–138 ಮತ್ತು ಕೆಎ–07 ಜಿ–188 ರ ವಾಹನಗಳಲ್ಲಿ ತಮ್ಮ ಸಿಬ್ಬಂದಿ ಹಾಗೂ ಗುಡಿಬಂಡೆ ಪೊಲೀಸ್ ಠಾಣೆಯ ಆರಕ್ಷಕ ಉಪ ನಿರೀಕ್ಷಕರು ಹಾಗೂ ಅವರ ಸಿಬ್ಬಂದಿಯವರು ಸೇರಿ ಜಂಟಿ ದಾಳಿ ಮಾಡಲು ಯೋಜನೆ ರೂಪಿಸಿಕೊಂಡು ಗವಿ ಕುಂಟೆಹಳ್ಳಿ ಗ್ರಾಮದ ನಿವಾಸಿಗಳನ್ನು ಪಂಚರನ್ನಾಗಿ ಮಾಡಿಕೊಂಡು ಇದೇ ಗ್ರಾಮದ ರತ್ನಮ್ಮ ಎಂಬುವವರ ಮನೆಯ ಮುಂದೆ ಕಾವಲು ಕಾಯುತ್ತಿರುವಾಗ ಗುಡಿಬಂಡೆ ಕಡೆಯಿಂದ ಒಬ್ಬ ವ್ಯಕ್ತಿ ಒಂದು ಟಿವಿಎಸ್ ದ್ವಿಚಕ್ರ ವಾಹನದಲ್ಲಿ ಮದ್ಯದ ಬಾಕ್ಸ್‌ಗಳನ್ನಿಟ್ಟುಕೊಂಡು ಬರುತ್ತಿದ್ದನು. ಸದರಿ ಆಸಾಮಿ ಬಗ್ಗೆ ಖಾತ್ರಿ ಪಡಿಸಿಕೊಂಡು ಪೊಲೀಸ್ ಸಿಬ್ಬಂದಿ ದಾಳಿ ಮಾಡಲು ರಸ್ತೆಗೆ ಬರುತ್ತಿದ್ದಂತೆಯೇ ಸಮವಸ್ತ್ರದಲ್ಲಿದ್ದ ಪೊಲೀಸ್ ಅಧಿಕಾರಿಗಳನ್ನು/ಸಿಬ್ಬಂದಿಯನು ನೋಡಿದ ಆಸಾಮಿ ಟಿವಿಎಸ್ ವಾಹನ ಮತ್ತು ಮಾಲನ್ನು ಬಿಟ್ಟು ಓಡಿ ಹೋದನು. ಈತನನ್ನು ಹಿಡಿಲು ಪೊಲೀಸ್‌ರವರು ಹಿಂಬಾಲಿಸಿ ಪ್ರಯತ್ನಿಸಿದಾಗ ಆತನು ಸಿಗದೇ ಪರಾರಿಯಾಗಿರುತ್ತಾನೆ. ಅದೇ ಸ್ಥಳದಲ್ಲಿದ್ದ ವೆಂಕಟೇಶ್ ಎಂಬುವವರನ್ನು ಓಡಿ ಹೋದವನ ಬಗ್ಗೆ ವಿಚಾರಿಸಿದಾಗ ಅವನ ಹೆಸರು ಶೀನಪ್ಪ, ಗರುಡಚಾರ್ಲಹಳ್ಳಿ ಎಂಬ ಗ್ರಾಮದವನು ಎಂದು ತಿಳಿಸಿದ್ದು, ನಂತರ ಪಂಚರ ಸಮಕ್ಷಮ ಟಿವಿಎಸ್ ಎಕ್ಸ್‌ಎಲ್ ವಾಹನವನ್ನು ಪರಿಶೀಲಿಸಿದಾಗ ಅದರ ನೊಂದಣಿ ಸಂ:ಕೆಎ–40 ಎಲ್–4281 ಆಗಿದ್ದು, ಈ ವಾಹನದಲ್ಲಿ (1) ಹೈ ಪಂಚ್ ಪೈನ್ ವಿಸ್ಕಿಯ 180 ಎಂಎಲ್ ನ 48 ಬಾಟಲುಗಳು (2) ರಾಜಾ ವಿಸ್ಕಿಯ 180 ಎಂಎಲ್‌ನ 48 ಬಾಟಲುಗಳು, ನಾಕೌಟ್ ಬೀರ್ 330 ಎಂ.ಎಲ್. ನ 11 ಬಾಟಲುಗಳಿದ್ದು, ಮದ್ಯ / ಬೀರ್‌ನಿಂದ ತಲಾ ಒಂದೊಂದು ಬಾಟಲನ್ನು ಎಫ್‌ಎಸ್‌ಎಲ್ ಗೆ ಮಾದರಿಯಾಗಿ ತೆಗೆದಿದ್ದು, ನಂತರ ವಾಹನ ಮುದ್ದೆಮಾಲನ್ನು ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡು ಈ ಕೃತ್ಯದ ಬಗ್ಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32,34, 43 (ಎ) ರೀತ್ಯಾ ತಕ್ಸೀರು ಸಂ:36/2010, ದಿನಾಂಕ:21/09/2010 ರಲ್ಲಿ ಮೊಕದ್ದಮೆ ದಾಖಲು ಮಾಡಿಕೊಂಡು ನ್ಯಾಯಾಲಯಕ್ಕೆ ಪ್ರ.ಮಾ.ವ. ಸಲ್ಲಿಸಿ ನಂತರ ಪ್ರ.ಮಾ.ವರದಿ ಮಹಜರ್ ಪ್ರತಿಯೊಂದಿಗೆ ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನ ಮುದ್ದೆಮಾಲನ್ನು ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ಪದಾರ್ಥಗಳ ಪಟ್ಟಿ ಸಂ:37/2010 ರಲ್ಲಿ ವಾಹನ ಮತ್ತು ಮದ್ಯ ಹಾಗೂ ಬೀರ್‌ನ್ನು ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ಅನುಮತಿಯನ್ನು ದಿನಾಂಕ:22/09/2010 ರಂದು ನೀಡಲಾಗಿದೆ.

ತನಿಖಾಧಿಕಾರಿಗಳು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಮದ್ಯ ಮತ್ತು ಬೀರ್‌ನಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂಖ್ಯೆ: ಸಿಸಿಎಲ್:5209/2010, ದಿನಾಂಕ:28/09/2010 ರಲ್ಲಿ, ಸದರಿ ಮದ್ಯದಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡು ಬಂದಿದ್ದು, ಮದ್ಯದ ಜೋರು $24.9^0$ ಯು.ಪಿ. ಇದ್ದು, ಬೀರ್‌ನ ಜೋರು 7.66% ವಿ.ವಿ. ಇದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆಂದು ತಜ್ಞರು ಅಭಿಪ್ರಾಯ ನೀಡಿದ್ದು, ಇದರ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರ ಪತ್ರ ದಿನಾಂಕ:28/04/2011 ರೊಂದಿಗೆ ಲಗತ್ತಿಸಿ ಸಲ್ಲಿಸುತ್ತಾ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 17.280 ಲೀ. ಮದ್ಯ ಮತ್ತು 3.630 ಲೀ. ಬೀರ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿದ್ದು, ಅದರಂತೆ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 17.280 ಲೀ. ಮದ್ಯ ಮತ್ತು 3.630 ಲೀ. ಬೀರ್‌ನ್ನು ದಿನಾಂಕ;29/04/2011 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿಯನ್ನು ಹೊರತುಪಡಿಸಿ ಉಳಿದ ಮದ್ಯ ಮತ್ತು ಬೀರ್‌ನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–4281 ರ ಮಾಲೀಕತ್ವದ ಬಗ್ಗೆ ಸಾರಿಗೆ ಅಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಕೋರಲಾಗಿ, ಸಾರಿಗೆ ಅಧಿಕಾರಿಗಳ ವರದಿಯಂತೆ ಸದರಿ ವಾಹನದ ಮಾಲೀಕರು ಮತ್ತು ಈ ಪ್ರಕರಣದ ಆರೋಪಿಯು

ಒಬ್ಬರೇ ಆಗಿದ್ದು, ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:21/04/2011 ರಂದು ಕಾರಣ ಕೇಳಿ ನೋಟೀಸ್‌ನ್ನು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಜಾರಿಯಾದ ಬಗ್ಗೆ ಸ್ವೀಕೃತಿ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ರವರ ದಿನಾಂಕ:24/05/2011 ರ ಪತ್ರದಲ್ಲಿ ಈ ಕಛೇರಿಯಿಂದ ಜಾರಿಯಾದ ಕಾರಣ ಕೇಳಿ ನೋಟೀಸ್‌ನ್ನು ಖುದ್ದು ಜಾರಿ ಮಾಡಿ 20 ದಿನಗಳು ಕಳೆದರೂ ವಾಹನ ನನ್ನದೆಂದು ಈ ಕಛೇರಿಗೆ ವಾಹನದ ವಾರಸ್ಸುದಾರರು ಬಂದಿರುವುದಿಲ್ಲ ಮತ್ತು ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ ಆದ್ದರಿಂದ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–4281 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಕರಣವನ್ನು ದಿನಾಂಕ:14/09/2011 ರಂದು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರಥಮ ಮಾಹಿತಿ ವರದಿ ವಶಪಡಿಸಿಕೊಂಡ ಪದಾರ್ಥಗಳ ಪಟ್ಟಿ ಹಾಗೂ ಮಹಜರ್‌ನ್ನು ಪರಿಶೀಲಿಸಲಾಗಿ ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ರವರು ದಿನಾಂಕ:21/09/2010 ರಂದು ಗುಡಿಬಂಡೆ ತಾಲ್ಲೂಕು ಗವಿಕುಂಟಹಳ್ಳಿ ಗ್ರಾಮದ ಗುಡಿಬಂಡೆ–ಹಂಪಸಂದ್ರ ಸರ್ಕಾರಿ ರಸ್ತೆಯ ರತ್ನಮ್ಮ ಎಂಬುವವರ ಮನೆಯ ಮುಂದೆ ರಸ್ತೆಕಾವಲು ಮಾಡುತ್ತಿದ್ದ ಸಮಯದಲ್ಲಿ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–4281 ರ ದ್ವಿಚಕ್ರ ವಾಹನದಲ್ಲಿ 17.280 ಲೀ. ಮದ್ಯ ಮತ್ತು 3.630 ಲೀ. ಬೀರ್‌ನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತು ಪಡಿಸಿರುವುದು ಮೇಲ್ಕಂಡ ಎಲ್ಲಾ ದಾಖಲೆಗಳಿಂದ ಸಾಬೀತಾಗಿರುತ್ತದೆ. ಅಲ್ಲದೆ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರ ವರದಿಯ ಪ್ರಕಾರ ಮಾದರಿಯ ಮದ್ಯ ಮತ್ತು ಬೀರ್‌ನಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಹಾಗೂ ಈ ವಾಹನ ತನ್ನದೆಂದು ಕೋರಿ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರ ಶಿಫಾರಸ್ಸಿನಂತೆ ಈ ಕೆಳಕಂಡ ಆದೇಶ.

**ಆದೇಶ**

ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು(ಪ್ರಭಾರ), ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ರವರ ದಿನಾಂಕ:21/09/2010 ರ ಪ್ರ.ಮಾ.ವ.ಸಂ:36/2010 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಎಕ್ಸ್‌ಎಲ್ ನೊಂದಣಿ ಸಂ:ಕೆಎ–40 ಎಲ್–4281 ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:14/09/2011 ರಂದು ತೆರೆದ ಪ್ರಾಧಿಕಾರದಲ್ಲಿ ಓದಿ ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಬಾಲಗಂಗಾಧರ ಹೆಚ್.ಬಿ.,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು (ಪ್ರಭಾರ),
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

ಪಿ.ಆರ್.ನಂ. 1169

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/74/2009–10, ದಿನಾಂಕ:30/08/2011.**

**ಉಪಸ್ಥಿತರು:– ಟಿ. ಜಯರಾಂ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.**

**ಪಿರ್ಯಾದುದಾರರು:–**
ಅಬಕಾರಿ ನಿರೀಕ್ಷಕರು,
ಬಾಗೇಪಲ್ಲಿ ವಲಯ,
ಬಾಗೇಪಲ್ಲಿ.

**ಅರ್ಜಿದಾರರು:–**
ಶ್ರೀ ಎಂ. ಡಿ. ಮಹಾಲಿಂಗಗೌಡ ಬಿನ್
ದೊಡ್ಡಮರಿಗೌಡ, ಕೋರಮಂಗಲ,
ಬೆಂಗಳೂರು.

**ಪ್ರಕರಣದ ಮುಖ್ಯಾಂಶಗಳು:–**

ಆಂಧ್ರ ಪ್ರದೇಶದಿಂದ ಕರ್ನಾಟಕ ರಾಜ್ಯಕ್ಕೆ ಅಕ್ರಮವಾಗಿ ಎನ್‌ಹೆಚ್–7 ರಸ್ತೆ ಮೂಲಕ ಸೇಂದಿ ರವಾನೆಯಾಗುತ್ತಿದೆ ಎಂಬುದಾಗಿ ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರಿಗೆ ದಿನಾಂಕ:15/09/2009 ರಂದು ಬಂದಿರುವ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿ ಪಂಚರೊಂದಿಗೆ ಆದೇಪಲ್ಲಿ ಕ್ರಾಸ್‌ನಲ್ಲಿ ರಸ್ತೆಕಾವಲು ಹಾಗೂ ವಾಹನಗಳನ್ನು ತಪಾಸಣೆ ಮಾಡುತ್ತಿದ್ದ ಸಮಯದಲ್ಲಿ ಅದೇ ಮಾರ್ಗದಲ್ಲಿ ಬಂದ ಟಾಟಾ ಇಂಡಿಕಾ ಕಾರನ್ನು ನಿಲ್ಲಿಸಿ ವಾಹನವನ್ನು ಪರಿಶೀಲಿಸಲಾಗಿ ಅದು ಟಾಟಾ ಇಂಡಿಕಾ ಕಾರು ಆಗಿದ್ದು, ಅದರ ನೊಂದಣಿ ಸಂ:ಕೆಎ–01 ಸಿ–9805 ಎಂಬುದಾಗಿದ್ದು, ವಾಹನದಲ್ಲಿದ್ದ ಇದ್ದ 03 ಜನ ಆಸಾಮಿಗಳ ಹೆಸರು ಮತ್ತು ವಿಳಾಸ ಕೇಳಲಾಗಿ ಒಬ್ಬ ರಮೇಶ ಬಿನ್ ದೇವಪ್ಪ, ವೆಂಕಟಾಪುರ, ಕೋರಮಂಗಲ,

ಬೆಂಗಳೂರು ಎಂದು ಮತ್ತೊಬ್ಬ ರಾಜೇಶ್ ಬಿನ್ ಸುನಂದರಾಜ್, ಉಡಮಲೋಡು ಗ್ರಾಮ, ಗೌರಿಬಿದನೂರು ತಾಲ್ಲೂಕು ಹಾಗೂ ರಿಚರ್ಡ ಬಿನ್ ಸ್ಯಾಮ್ಯುಯಲ್, ಉಡಮಲೋಡು, ಗೌರಿಬಿದನೂರು ತಾಲ್ಲೂಕು ಎಂದು ತಿಳಿಸಿರುತ್ತಾರೆ. ತದನಂತರ ಅದನ್ನು ತಪಾಸಣೆ ಮಾಡಿದಾಗ ವಾಹನದ ಹಿಂಬದಿಯ ಡಿಕ್ಕಿಯಲ್ಲಿ ಎರಡು ಹಸಿರು ಬಣ್ಣದ ಪ್ಲಾಸ್ಟಿಕ್ ಬಿಂದಿಗೆಗಳಿದ್ದು, ಅವುಗಳ ಬಾಯಿಗೆ ಕಟ್ಟಿದ್ದ ಪ್ಲಾಸ್ಟಿಕ್ ಪೇಪರ್ ಬಿಚ್ಚಿ ನೋಡಲಾಗಿ ಅದರಲ್ಲಿ ಬಿಳಿ ಬಣ್ಣದ ಸೇಂದಿ ಇದ್ದು, ಒಂದೊಂದು ಬಿಂದಿಗೆಯಲ್ಲಿ ಸುಮಾರು 15 ಲೀಟರ್‌ನಂತೆ ಎರಡು ಬಿಂದಿಗೆಗಳಿಂದ ಒಟ್ಟು 30 ಲೀ. ಸೇಂದಿ ಇದ್ದು, ತಲಾ ಒಂದೊಂದು ಬಿಂದಿಗೆಯಿಂದ 650 ಎಂ.ಎಲ್. ನಂತೆ ರಾಸಾಯನಿಕ ಪರೀಕ್ಷೆ ಮಾದರಿಗಾಗಿ ತೆಗೆದು ಆ ಬಾಟಲಿಗಳಿಗೆ ಬಿರುಡೆ ಹಾಕಿ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ ಇಲಾಖೆಯ ಸೀಲುನಿಂದ ಸೀಲು ಮಾಡಲಾಯಿತು. ಅದೇ ರೀತಿ 02 ಬಿಂದಿಗೆಗಳಿಗೂ ಮೊಹರು ಮಾಡಿ ಪಂಚರ ಸಹಿ ಪಡೆದು ನಂತರ ಸೇಂದಿಯನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11,13,14 ರೀತ್ಯಾ ಉಲ್ಲಂಘನೆಯಾಗಿದ್ದು ಹಾಗೂ ಇದೇ ಕಾಯ್ದೆ ಕಲಂ 32 ಮತ್ತು 43 (ಎ) ರೀತ್ಯಾ ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಈ ಕೃತ್ಯಕ್ಕೆ ತಕ್ಸೀರು ಸಂ:04/2009-10, ದಿನಾಂಕ:15/09/2009 ರಲ್ಲಿ ಮೊಕದ್ದಮೆ ದಾಖಲಿಸಿ ಪ್ರ.ಮಾ.ವರದಿಯೊಂದಿಗೆ ಆರೋಪಿಗಳನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿ ತದನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಪಿ.ಎಫ್.ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನ ಮತ್ತು ಸೇಂದಿಯನ್ನು ಬಾಗೇಪಲ್ಲಿ ವಲಯ ಕಛೇರಿಯಲ್ಲಿಟ್ಟುಕೊಳ್ಳಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ಪದಾರ್ಥಗಳ ಪಟ್ಟಿಯಲ್ಲಿ ವಾಹನ ಮತ್ತು ಸೇಂದಿಯನ್ನು ಬಾಗೇಪಲ್ಲಿ ವಲಯ ಕಛೇರಿಯಲ್ಲಿಟ್ಟುಕೊಳ್ಳಲು ಈ ಪ್ರಾಧಿಕಾರದಿಂದ ಅನುಮತಿಯನ್ನು ದಿನಾಂಕ:15/09/2009 ರಂದು ನೀಡಲಾಗಿತ್ತು.

ತನಿಖಾಧಿಕಾರಿಗಳು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಸೇಂದಿಯಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:5059/2009, ದಿನಾಂಕ:06/10/2009 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ 3.28 ರಿಂದ 3.35% ವಿ.ವಿ. ಇದ್ದು, ಇದರಲ್ಲಿ ಈಥೈಲ್ ಆಲ್ಕೋಹಾಲ್ ಇದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆಂದು ತಜ್ಞರು ಅಭಿಪ್ರಾಯ ನೀಡಿದ್ದು, ಇದರ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರ ಪತ್ರ ದಿನಾಂಕ:16/04/2010 ರೊಂದಿಗೆ ಲಗತ್ತಿಸಿ ಸಲ್ಲಿಸುತ್ತಾ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 30 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿರುತ್ತಾರೆ. ಅದರಂತೆ ಈ ಪ್ರಾಧಿಕಾರದಿಂದ ದಿನಾಂಕ:26/04/2010 ರ ಆದೇಶದಲ್ಲಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಿರುವ ( ಟಾಟಾ ಇಂಡಿಕಾ ಕಾರನ್ನು ಹೊರತುಪಡಿಸಿ) 30 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿಯನ್ನು ಹೊರತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ನಾಶಪಡಿಸಲು ಆದೇಶಿಸಲಾಗಿತ್ತು.

ಈ ಮೊಕದ್ದಮೆಯಲ್ಲಿ ಜಪ್ತುಪಡಿಸಿರುವ ಟಾಟಾ ಇಂಡಿಕಾ ಕಾರು ನೊಂದಣಿ ಸಂ:ಕೆಎ-01 ಸಿ-9805 ರ ಮಾಲೀಕತ್ವದ ವಿವರಗಳನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ಪತ್ರ ಬರೆದಿದ್ದು, ಸಾರಿಗೆ ಅಧಿಕಾರಿಗಳಿಂದ ಸ್ವೀಕೃತವಾದ 'ಬಿ' ರಿಜಿಸ್ಟರ್ ಪ್ರಕಾರ ಈ ವಾಹನದ ಮಾಲೀಕತ್ವವನ್ನು ಶ್ರೀ ಮಹಾಲಿಂಗ ಗೌಡ ಎಂ.ಡಿ., ದೇವಪ್ಪ ಕಾಂಪೌಂಡ್, 13ನೇ ಕ್ರಾಸ್, ವೆಂಕಟಾಪುರ, ಕೋರಮಂಗಲ, ಬೆಂಗಳೂರು-560034 ಎಂದು ತಿಳಿದು ಬಂದಿರುತ್ತದೆ.

ಶ್ರೀ ಮಹಾಲಿಂಗ ಗೌಡ ಎಂ.ಡಿ. ಬಿನ್ ದೊಡ್ಡಮರಿಗೌಡ, ಕೋರಮಂಗಲ, ಬೆಂಗಳೂರು ಇವರು ದಿನಾಂಕ:24/09/2009 ರಂದು ವಕೀಲರ ವಕಾಲತ್ತಿನೊಂದಿಗೆ ಈ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿದ್ದು, ಸದರಿ ಮನವಿಯಲ್ಲಿ ಈ ವಾಹನವು ತಮ್ಮ ಕುಟುಂಬಕ್ಕೆ ಆಧಾರವಾಗಿರುವುದರಿಂದ ಈ ವಾಹನವನ್ನು ಮಧ್ಯಂತರವಾಗಿ ಬಿಡುಗಡೆ ಮಾಡಲು ಕೋರಿರುತ್ತಾರೆ. ಪ್ರಾಧಿಕಾರವು ವಿಧಿಸುವ ಷರತ್ತುಗಳಿಗೆ ಬದ್ಧರಾಗಿರುವುದಾಗಿ ತಿಳಿಸಿರುತ್ತಾರೆ.

ಪ್ರಕರಣವನ್ನು ಪ್ರಾಧಿಕಾರದಲ್ಲಿ ಹಲವಾರು ದಿನಾಂಕಗಳಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ಅರ್ಜಿದಾರರು, ಪರವಕೀಲರು ವಾಹನದ ಮೂಲ ದಾಖಲಾತಿಗಳೊಂದಿಗೆ ಹಾಜರಾಗಿರುವುದಿಲ್ಲ. ಅರ್ಜಿದಾರರಿಗೆ ಆರ್.ಪಿ.ಎ.ಡಿ. ಮುಖಾಂತರ ವಿಚಾರಣಾ ನೋಟೀಸ್‌ನ್ನು ರವಾನಿಸಿದ್ದು, ನೋಟೀಸ್ ಜಾರಿಯಾಗದೇ ಈ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ. ಸದರಿ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ರವರಿಗೆ ಜಾರಿ ಮಾಡಲು ನಿರ್ದೇಶನ ನೀಡಿದ ಮೇರೆಗೆ ಮಾಲೀಕರ ವಿಳಾಸಕ್ಕೆ ಅಬಕಾರಿ ಉಪ ನಿರೀಕ್ಷಕರು-1, ಬಾಗೇಪಲ್ಲಿ ವಲಯ ಇವರು ಖುದ್ದು ಭೇಟಿ ನೀಡಿ ವಾಹನ ಮಾಲೀಕರಿಗೆ/ಅರ್ಜಿದಾರರಿಗೆ ನೋಟೀಸ್ ಜಾರಿ ಮಾಡಲು ಹೋದಾಗ ಮಾಲೀಕರು ನೋಟೀಸ್ ಪಡೆಯಲು ನಿರಾಕರಿಸಿರುವುದಾಗಿ ದಿನಾಂಕ:23/05/2011 ರ ಪತ್ರದಲ್ಲಿ ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ರವರು ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಕರಣವನ್ನು ಅಂತಿಮ ಆದೇಶಕ್ಕಾಗಿ ದಿನಾಂಕ:30/08/2011 ಕ್ಕೆ ನಿಗಧಿಪಡಿಸಿರುತ್ತೆ.

ದಿನಾಂಕ:30/08/2011 ರಂದು ಪ್ರಾಧಿಕಾರದಲ್ಲಿ ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿ ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ ಇವರು ಸಿಬ್ಬಂದಿ ಹಾಗೂ ಪಂಚರೊಂದಿಗೆ ದಿನಾಂಕ:15/09/2009 ರಂದು ಎನ್‌ಹೆಚ್-7 ರಸ್ತೆಯಲ್ಲಿರುವ ಆದೇಪಲ್ಲಿ ಕ್ರಾಸ್ ಬಳಿ ರಸ್ತೆಕಾವಲು ಮಾಡುತ್ತಿರುವಾಗ ಟಾಟಾ ಇಂಡಿಕಾ ಕಾರು ನೊಂದಣಿ ಸಂ: ಕೆಎ-01 ಸಿ-9805 ರ ವಾಹನದಲ್ಲಿ 30 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತು ಪಡಿಸಿರುವುದು ಪ್ರಥಮ ಮಾಹಿತಿ ವರದಿ, ಮಹಜರ್ ಮತ್ತು ಜಪ್ತುಪಡಿಸಿದ ವಸ್ತುಗಳ ಪಟ್ಟಿ ಈ ದಾಖಲೆಗಳಿಂದ ಸಾಬೀತಾಗಿರುತ್ತದೆ. ಅಲ್ಲದೆ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರ ವರದಿಯ ಪ್ರಕಾರ ಮಾದರಿಯ ಸೇಂದಿಯಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಹಾಗೂ ಪ್ರಾಧಿಕಾರದಿಂದ ಹೊರಡಿಸಿದ ವಿಚಾರಣಾ ನೋಟೀಸ್ ಪಡೆಯಲು ನಿರಾಕರಿಸಿರುವುದರಿಂದ ಮಾಲೀಕರಿಗೆ ವಾಹನದ ಬಗ್ಗೆ ಆಸಕ್ತಿ ಇಲ್ಲದೇ ಇರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಕರಣದಲ್ಲಿ ಜಪ್ತುಮಾಡಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಿರ್ಧರಿಸಲಾಯಿತು. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ**

ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು(ಪ್ರಭಾರ), ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಿ ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ, ಬಾಗೇಪಲ್ಲಿ ರವರ ದಿನಾಂಕ:15/09/2009 ರ ಪ್ರ.ಮಾ.ವ.ಸಂ:04/2009 ರಲ್ಲಿ ಜಪ್ತುಪಡಿಸಿರುವ ಟಾಟಾ ಇಂಡಿಕಾ ಕಾರು ನೊಂದಣಿ ಸಂ:ಕೆಎ–01 ಸಿ–9805 ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ)(2) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:30/08/2011 ರಂದು ತೆರೆದ ಪ್ರಾಧಿಕಾರದಲ್ಲಿ ಓದಿ ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಬಾಲಗಂಗಾಧರ ಹೆಚ್.ಬಿ.,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು (ಪ್ರಭಾರ),
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

ಪಿ.ಆರ್.ನಂ. 1167

## ಲೋಕೋಪಯೋಗಿ ಇಲಾಖೆ

**ಸಹಾಯಕ ಕಾರ್ಯಪಾಲಕ ಅಭಿಯಂತರ್‌ರವರ ಕಛೇರಿ, ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ. ನಂ.7 ಉಪ ವಿಭಾಗ, ಸೊರಬ.**

**ನಂ.ಸಕಾಇಂ/ಲೋಇ/ಸೊರಬ/ಉ.ವಿ/ಮಾಹಿತಿ ಹಕ್ಕು/2011–12 ದಿನಾಂಕ:– 16/12/2011**

**ಸುತ್ತೋಲೆ**

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(1) ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ:ಸಿ.ಬಿ.ಎಸ್/ ಮಾಹಿತಿ ಹಕ್ಕು ಕೈಪಿಡಿ/2005/ಇ.ಎಸ್.ಎಲ್/05–06/ದಿನಾಂಕ:19–09–2005ರ ಪ್ರಕಾರ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರಾದ ಶ್ರೀ ಬಿ.ಎಸ್. ಬಾಲನ್ ನಂ.7 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ ವಿಭಾಗ ಸೊರಬ. ಇವರು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ (ಎಸ್.ಪಿ.ಐ.ಓ) ನೇಮಕಗೊಂಡಿದ್ದು, ಮಾಹಿತಿ ನೀಡುವ ಪ್ರಕ್ರಿಯೆಯು ಸುಲಿತವಾಗಿ ನಡೆಯಲು ಅನುಕೂಲವಾಗುವಂತೆ ಶ್ರೀ ಎಸ್. ಶೇಷಪ್ಪ, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ, ನಂ. 7, ಉಪ ವಿಭಾಗ, ಸೊರಬ. ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ (ಎ.ಪಿ.ಐ.ಓ) ನೇಮಕಗೊಳಿಸಲಾಗಿದೆ.

ಈ ಕಛೇರಿಯ ಮಾಹಿತಿಗಳನ್ನು ಸಾರ್ವಜನಿಕರಿಗೆ ನೀಡುವ ಸಲುವಾಗಿ ಮಾಹಿತಿ ಹಕ್ಕು ಕೈಪಿಡಿ–2005ನ್ನು ಈ ಮೂಲಕ ಪರಿಷ್ಕರಿಸಿ ಹೊರಡಿಸಲಾಗಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ, ಸೊರಬ.

**ನಮೂನೆ**

**ಮಾಹಿತಿ ಹಕ್ಕು ಅಧಿನಿಯಮ 2005**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ, ನಂ. 7, ಉಪ ವಿಭಾಗ, ಸೊರಬ.**

ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 5(1)(2)ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1)ರ ಪ್ರಕಾರ

| ಅಧಿಕಾರಿಯ ಹೆಸರು | ಪದನಾಮ |
|---|---|
| ಶ್ರೀ ಬಿ.ಎಸ್. ಬಾಲನ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ.7:ಲೋ.ಇ. ಉಪ ವಿಭಾಗ, ಸೊರಬ. |

**ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5 (2) ರ ಪ್ರಕಾರ**

| ಅಧಿಕಾರಿಯ ಹೆಸರು | ಪದನಾಮ |
|---|---|
| ಶ್ರೀ ಎಸ್. ಶೇಷಪ್ಪ | ಸಹಾಯಕ ಇಂಜಿನಿಯರ್, ನಂ.7:ಲೋ.ಇ. ಉಪ ವಿಭಾಗ, ಸೊರಬ. |

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19 (1)ರ ಪ್ರಕಾರ ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್,
ಲೋ.ಬಂ. ಮತ್ತು ಒ.ಜ.ಸಾ ಇಲಾಖೆ,
ಶಿವಮೊಗ್ಗ ವಿಭಾಗ ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ–2005 ಸೆಕ್ಷನ್ 5 (1) ರ ಪ್ರಕಾರ ಶ್ರೀ ಬಿ.ಎಸ್. ಬಾಲನ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ (ಎಸ್.ಪಿ.ಐ.ಓ) ಕರ್ತವ್ಯ ನಿರ್ವಹಿಸಲು ದಿನಾಂಕ: –01/03/2011ರಿಂದ ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಶ್ರೀ ಬಿ.ಎಸ್. ಬಾಲನ್**
ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ, ಸೊರಬ.

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ–2005 ಸೆಕ್ಷನ್ 5 (1) ರ ಪ್ರಕಾರ ಶ್ರೀ ಎಸ್. ಶೇಷಪ್ಪ ಸಹಾಯಕ ಇಂಜಿನಿಯರ್ ಆದ ನಾನು ವಿಶೇಷ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: –27/05/2011ರಿಂದ ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಶ್ರೀ ಎಸ್. ಶೇಷಪ್ಪ**
ಸಹಾಯಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ, ಸೊರಬ.

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದ ಪಕ್ಷದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಭಾಗ ಶಿವಮೊಗ್ಗ

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ,
ಸೊರಬ.

**ಲೋಕೋಪಯೋಗಿ ಇಲಾಖೆ**

**ಮಾಹಿತಿ ಹಕ್ಕು ಕೈಪಿಡಿ–2005 ಸೆಕ್ಷನ್ 4 (1) (ಬಿ) ಅನ್ವಯ**
**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕಛೇರಿ**
**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**
**ನಂ. 7, ಉಪ ವಿಭಾಗ ಸೊರಬ ಶಿವಮೊಗ್ಗ ಜಿಲ್ಲೆ**
**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**
**ನಂ. 7, ಉಪ ವಿಭಾಗ ಸೊರಬ ಶಿವಮೊಗ್ಗ ಜಿಲ್ಲೆ**

**ಪ್ರಕಟಣೆ**

| | |
|---|---|
| 1 | ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, ನಿಯಮಗಳು 2005 ದಿನಾಂಕ: 11–10–2005 ಮತ್ತು ಪರಿಷ್ಕರಣೆ ದಿನಾಂಕ:– 31/5/2009ರಲ್ಲಿ ಇದ್ದಂತೆ |
| 2 | ಮಾಹಿತಿ ಕೋರಿಕೆ ಅರ್ಜಿಗಳನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸಬೇಕು. ಅರ್ಜಿ ನಮೂನೆಯನ್ನು ಉಚಿತವಾಗಿ ಈ ಕಛೇರಿಯ ಸಾರ್ವಜನಿಕ ಮಾಹಿತಿ ಹಕ್ಕು ವಿಭಾಗದಿಂದ ಪಡೆಯಹುದು. |
| 3 | ಸರಿಯಾಗಿ ಭರ್ತಿ ಮಾಡಿದ ಅರ್ಜಿಯನ್ನು ಈ ಕಛೇರಿಯ ಸಾರ್ವಜನಿಕ ಟಪಾಲು ಸ್ವೀಕೃತಿ ವಿಭಾಗದಲ್ಲಿ ಸಲ್ಲಿಸಬೇಕು ಮತ್ತು ಸ್ವೀಕೃತಿಯನ್ನು ತಪ್ಪದೇ ಪಡೆಯಬೇಕು ಮತ್ತು ರೂ. 10.00 ಅರ್ಜಿ ಶುಲ್ಕವನ್ನು ಪಾವತಿಸತಕ್ಕದ್ದು. |
| 4 | ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿದ್ದಲ್ಲಿ ಸಂದಾಯ ಮಾಡಬೇಕಾದ ಶುಲ್ಕದ ಮಾಹಿತಿಯನ್ನು ನಿಮಗೆ 7 ದಿನಗಳ ಒಳಗೆ ತಿಳಿಸಲಾಗುವುದು. |
| 5 | ಶುಲ್ಕ ಪಾವತಿಸಿದ ದಿನಾಂಕದಿಂದ 30 ದಿನಗಳೊಳಗೆ ಕೋರಿದ ಮಾಹಿತಿಯನ್ನು ಒದಗಿಸಲಾಗುತ್ತದೆ. |

| | |
|---|---|
| 6 | ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿಲ್ಲದಿದ್ದಲ್ಲಿ 15 ದಿನಗಳೊಳಗೆ ತಿಳಸಲಾಗುವುದು. |
| 7 | ನಿಗಧಿತ ಕಾಲಾವಧಿಯಲ್ಲಿ ಮಾಹಿತಿ ಅಥವಾ ಸೂಚನೆ ನೀಡದಿದ್ದಲ್ಲಿ ಅಥವಾ ಆದೇಶದಿಂದ ಅರ್ಜಿದಾರರು ಭಾದಿತರಾದಲ್ಲಿ 30 ದಿನಗಳೊಳಗೆ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬಹುದು. |
| 8 | ಮಾಹಿತಿ ನೀಡಲು ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ನಂ.7 ಉಪ ವಿಭಾಗ, ಸೊರಬ ಇವರು ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ. |
| 9 | ಮೇಲ್ಮನವಿ ಸಲ್ಲಿಸಲು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರು ಮೇಲ್ಮನವಿ ಪ್ರಾಧಿಕಾರಿಯಾಗಿರುತ್ತಾರೆ. |
| 10 | ಹೆಚ್ಚಿನ ವಿವರಗಳಿಗೆ ಮೇಲ್ಕಂಡ ಅಧಿಕಾರಿಗಳನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು. |

ದಿನಾಂಕ:– 16–12–2011

ಸ್ಥಳ:– ಸೊರಬ

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ, ಸೊರಬ.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕಛೇರಿ**
**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**
**ಮಾಹಿತಿ ಹಕ್ಕು ಕೈಪಿಡಿ–2005 ಸೆಕ್ಷನ್ 4(1) (ಬಿ) ಅನ್ವಯ**

**1. ಸಂಸ್ಥೆ ಬಗ್ಗೆ ವಿವಗಳು–ಕಾರ್ಯಗಳು ಮತ್ತು ಕರ್ತವ್ಯಗಳು**

(ಅ) ಸಂಸ್ಥೆಯ ಹೆಸರು– ಲೋ.ಇ.ನಂ 7 ಉಪ ವಿಭಾಗ, ಸೊರಬ

(ಆ) ರಚನೆ

**ಸಹಾಯಕ ಕಾರ್ಯಪಾಲಕ ಇಂಜಿನಿಯರ್–1.**

| ತಾಂತ್ರಿಕ ಶಾಖೆ | ಆಡಳಿತ ಶಾಖೆ | ಪ್ರವಾಸಿ ಮಂದಿರದ ಸಿಬ್ಬಂದಿ |
|---|---|---|
| ಸಹಾಯಕ ಇಂಜಿನಿಯರ್–2 | ಪ್ರ.ದ.ಸ–1 | ಮೇಟಿ–1 (ಖಾಲಿ ಇದೆ) |
| ಕಿರಿಯ ಇಂಜಿನಿಯರ್–2 | ದ್ವಿ.ದ.ಸ–2 | ವಾಟರ್‌ಬಾಯ್–1 (ನಿಯೋಜನೆ ಶಿವಮೊಗ್ಗ ವೃತ್ತ ಕಛೇರಿ ಶಿವಮೊಗ್ಗಕ್ಕೆ) |
| ವರ್ಕ್ ಇನ್ಸ್‌ಪೆಕ್ಟರ್–1 | ಗ್ರೂಪ್ 'ಡಿ'–2 | ಸ್ವೀಪರ್–1 |

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ, ಸೊರಬ.

**ಕಾರ್ಯಗಳು ಮತ್ತು ಕರ್ತವ್ಯಗಳು**

ಸೊರಬ ತಾಲ್ಲೂಕು ಲೋಕೋಪಯೋಗಿ ಇಲಾಖೆ ವ್ಯಾಪ್ತಿಯಲ್ಲಿ ಬರುವ ಕಟ್ಟಡಗಳು, ರಸ್ತೆಗಳು ಹಾಗೂ ಸಾರ್ವಜನಿಕ ಆಸ್ತಿ–ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಲಾಗುತ್ತದೆ. ಹಾಗೂ ಸೊರಬ ತಾಲ್ಲೂಕಿಗೆ ಸಂಬಂಧಿಸಿದಂತೆ ಒಳಗೊಂಡಿರುತ್ತದೆ.

**2. ಅಧಿಕಾರಿಗಳು ಮತ್ತು ಸಿಬ್ಬಂಧಿಯವರ ಕರ್ತವ್ಯಗಳು:–**

**(1) ಸಹಾಯಕ ಕಾರ್ಯಪಾಲಕ ಇಂಜಿನಿಯರ್–1:–**

ಸೊರಬ ತಾಲ್ಲೂಕು ಲೋ.ಇ ಉಪ ವಿಭಾಗದ ವ್ಯಾಪ್ತಿಗೆ ಒಳಗೊಂಡಂತೆ ಸೊರಬ ತಾಲ್ಲೂಕಿಗೆ ಅಧಿಕೃತ ಮುಖ್ಯಸ್ಥರಾಗಿದ್ದು, ಸರ್ಕಾರಿ ನಿಯಮಗಳ ಚೌಕಟ್ಟಿನಲ್ಲಿ ಹಾಗೂ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಾವಳಿಗೆ ಒಳಪಟ್ಟ ಪ್ರಕರಣಗಳ ವಿಲೇವಾರಿ ಮತ್ತು ಎಲ್ಲಾ ವ್ಯವಹಾರ ಜವಬ್ದಾರಿ ಹೊಂದಿರುತ್ತಾರೆ. ಹಾಗೂ ಅಧೀನ ಸಿಬ್ಬಂದಿಯ ಮೇಲ್ವಿಚಾರಣೆ ಮತ್ತು ನಿಯಂತ್ರಣ ಅಧಿಕಾರ ಹೊಂದಿರುತ್ತಾರೆ.

**(2) ಸಹಾಯಕ ಇಂಜಿನಿಯರ್–1:–**

ಸೊರಬ ತಾಲ್ಲೂಕಿನ ಉಳವಿ ಮತ್ತು ಕಸಬಾ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಕಟ್ಟಡ, ಸೇತುವೆ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಅಂದರೆ ದಾಖಲೆಗಳನ್ನು

ಸಿದ್ದಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪ ವಿಭಾಗ ಕಛೇರಿಗೆ ಸಲ್ಲಿಸುವುದು. ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವಹಿಸಿದ ಇತರೆ ಕೆಲಸಗಳನ್ನು ನಿರ್ವಹಿಸುವುದು. ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ದಪಡಿಸುವುದು. ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸುವುದು.

**(3) ಸಹಾಯಕ ಇಂಜಿನಿಯರ್–2:–**

ಸೊರಬ ತಾಲ್ಲೂಕಿನ ಕಸಬಾ ಮತ್ತು ಚಂದ್ರಗುತ್ತಿ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಕಟ್ಟಡ ಸೇತುವೆ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಅಂದರೆ ದಾಖಲೆಗಳನ್ನು ಸಿದ್ದಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪ ವಿಭಾಗ ಕಛೇರಿಗೆ ಸಲ್ಲಿಸುವುದು ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವಹಿಸಿದ ಇತರೆ ಕೆಲಸಗಳನ್ನು ನಿರ್ವಹಿಸುವುದು. ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ದಪಡಿಸುವುದು. ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸುವುದು.

**(4) ಕಿರಿಯ ಇಂಜಿನಿಯರ್–1**

ಕಛೇರಿಯ ಡಿ.ಎಂ ಶಾಖೆಯ ನಿರ್ವಹಣೆ, ಕಛೇರಿ ವಾಹನ ಶಾಖೆ ನಿರ್ವಹಣೆ, ಸೊರಬ ತಾಲ್ಲೂಕಿನ ಕುಪ್ಪಗಡ್ಡೆ, ಜಡೆ ಮತ್ತು ಉಳವಿ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಸೇತುವೆ ಮತ್ತು ಸೊರಬ ಪಟ್ಟಣದಲ್ಲಿ ಕಟ್ಟಡ ಕಾಮಗಾರಿ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟಂತೆ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಟೆಂಡರ್ ದಾಖಲೆಗಳನ್ನು ಸಿದ್ದಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪ ವಿಭಾಗ ಕಛೇರಿಗೆ ಸಲ್ಲಿಸುವುದು, ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ದಪಡಿಸುವುದು, ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸಿ ಪಾವತಿಗಾಗಿ ಸ.ಕಾ.ಇಂರವರಿಗೆ ಸಲ್ಲಿಸುವುದು. ಅದಲ್ಲದೆ ಸ.ಕಾ.ಇಂರವರು ವಹಿಸಿದ ಇತರೆ ಕೆಲಸಗಳು.

**(5) ಕಿರಿಯ ಇಂಜಿನಿಯರ್–2**

ಸೊರಬ ತಾಲ್ಲೂಕಿನ ಆನವಟ್ಟಿ ಮತ್ತು ಜಡೆ ಹೋಬಳಿಗಳ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆ ಕಾಮಗಾರಿಗಳು, ರಸ್ತೆ, ಕಟ್ಟಡ, ಸೇತುವೆ ಇತ್ಯಾದಿಗಳ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಪಟ್ಟ ಅಂದಾಜು ಪಟ್ಟಿಗಳನ್ನು ತಯಾರಿಸುವುದು. ಟೆಂಡರ್ ದಾಖಲೆಗಳನ್ನು ಸಿದ್ದಪಡಿಸುವುದು. ನಿಯತಕಾಲಿಕ ವರದಿಗಳನ್ನು ಉಪ ವಿಭಾಗ ಕಛೇರಿಗೆ ಸಲ್ಲಿಸುವುದು ಗುತ್ತಿಗೆದಾರರ ಬಿಲ್ಲುಗಳನ್ನು ಸಿದ್ದಪಡಿಸುವುದು. ಅಳತೆಗಳನ್ನು ಅಳತೆ ಪುಸ್ತಕದಲ್ಲಿ ದಾಖಲಿಸಿ ಪಾವತಿಗಾಗಿ ಸ.ಕಾ.ಇಂರವರಿಗೆ ಸಲ್ಲಿಸುವುದು. ಅದಲ್ಲದೆ ಸ.ಕಾ.ಇಂರವರು ವಹಿಸಿದ ಇತರೆ ಕೆಲಸಗಳು.

**(7) ಪ್ರಥಮ ದರ್ಜೆ ಸಹಾಯಕ:– 1**

ಆಡಳಿತ ಶಾಖೆಯ ಪತ್ರ ವ್ಯವಹಾರ ಉಪ ವಿಭಾಗ ಕಛೇರಿಯ ಕಾಮಗಾರಿ ಮತ್ತು ಸಾಮಾನ್ಯ ನಗದು ಪುಸ್ತಕ ನಿರ್ವಹಣೆ, ಮಂಜೂರಾದ ಕಾಮಗಾರಿ ಬಿಲ್ಲುಗಳ ಪ್ರಿ ಆಡಿಟ್ ಮಾಡುವುದ, ಸಿಬ್ಬಂದಿ ವೆಚ್ಚದ ವರದಿ ಸಲ್ಲಿಸುವುದು. ರಹಸ್ಯ ವರದಿಗಳ ನಿರ್ವಹಣೆ, ರಶೀದಿ ಪುಸ್ತಕ ಚಲನ್ ನಿರ್ವಹಣೆ, ಸಿಬ್ಬಂದಿ ವರ್ಗದ ಸೇವಾ ಪುಸ್ತಕ ನಿರ್ವಹಣೆ, ಸ.ಕಾ.ಇಂರವರು ನಿರ್ದೇಶಿಸುವ ಯಾವುದೇ ಕೆಲಸಗಳು.

**(8) ದ್ವಿತೀಯ ದರ್ಜೆ ಸಹಾಯಕ:– 1**

ಉಗ್ರಾಣ ಶಾಖೆಗೆ ಸಂಬಂಧಿಸಿದ ವ್ಯವಹಾರ ಮಾಸಿಕ ಲೆಕ್ಕ ಪತ್ರ ಸದ್ಯಕ್ಕೆ ಅರ್ಧವಾರ್ಷಿಕ, ವಾರ್ಷಿಕ ವರದಿ ಸಲ್ಲಿಕೆ, ಉಗ್ರಾಣ ಶಾಖೆಗೆ ಸಂಬಂಧಿಸಿದ ಇತರೆ ಕಡತಗಳ ವಿಲೇವಾರಿ, ಕಾಮಗಾರಿಗೆ ಸಂಬಂಧಿಸಿದ ಪತ್ರ ವ್ಯವಹಾರ ಮತ್ತು ಸ.ಕಾ.ಇಂರವರು ನಿರ್ದೇಶಿಸುವ ಯಾವುದೇ ಕೆಲಸಗಳು.

**(9) ದ್ವಿತೀಯ ದರ್ಜೆ ಸಹಾಯಕ:– 2**

ಅಧಿಕಾರಿ/ ಸಿಬ್ಬಂದಿಗಳ ವೇತನ ಬಿಲ್ಲು ತಯಾರಿಕೆ ಹಾಗೂ ಸಲ್ಲಿಕೆ, ಆಮದು ಮತ್ತು ರಫ್ತು ವಹಿ ನಿರ್ವಹಣೆ, ಉದ್ಯೋಗ ವಿನಿಮಯ ಕಛೇರಿಯ ವರದಿಗಳ ಸಲ್ಲಿಕೆ. ಕಛೇರಿಯ ಅಧಿಕಾರಿ/ ಸಿಬ್ಬಂದಿಯವರ ಪ್ರಯಾಣ ಭತ್ಯೆ ಬಿಲ್ಲುಗಳನ್ನು ತಯಾರಿಸುವುದು ಹಾಗೂ ಸ.ಕಾ.ಇಂರವರು ನಿರ್ದೇಶಿಸುವ ಯಾವುದೇ ಕೆಲಸಗಳು.

**(10) ಗ್ರೂಪ್ 'ಡಿ'–1:–**

ಕಛೇರಿಯ ಎಲ್ಲಾ ಕೊಠಡಿಗಳನ್ನು ಶುಚಿಯಾಗಿಡುವುದು. ಕಡತಗಳ ವಿಲೇವಾರಿ ಬಗ್ಗೆ ಅಧಿಕಾರಿ: ಸಿಬ್ಬಂದಿಯವರಿಗೆ ಸಹಕರಿಸುವುದು, ತಲುಪಿಸುವುದು, ಖಜಾನೆಗೆ ಬಿಲ್ಲುಗಳನ್ನು ಸಲ್ಲಿಸುವುದು. ಸ್ಥಳೀಯ ಮುದ್ದಾಂ ಟಪಾಲು ವಿತರಣೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಹಿಸಿದ ಯಾವುದೇ ಕೆಲಸಗಳು

**(11) ಗ್ರೂಪ್ 'ಡಿ'–2:–**

ಕಛೇರಿಯ ಎಲ್ಲಾ ಕೊಠಡಿಗಳನ್ನು ಶುಚಿಯಾಗಿಡುವುದು. ಕಡತಗಳ ವಿಲೇವಾರಿ ಬಗ್ಗೆ ಅಧಿಕಾರಿ: ಸಿಬ್ಬಂದಿಯವರಿಗೆ ಸಹಕರಿಸುವುದು, ತಲುಪಿಸುವುದು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಹಿಸಿದ ಯಾವುದೇ ಕೆಲಸಗಳು

**(12) ವರ್ಕ್ ಇನ್ಸ್‌ಪೆಕ್ಟರ್:–**

ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಸೂಚಿಸಿರುವಂತೆ ಶಾಖಾಧಿಕಾರಿಗಳ ಕಾಮಗಾರಿ ಕಾರ್ಯ ನಡೆಯುವ ಸಮಯದಲ್ಲಿ ಕಾಮಗಾರಿ ಸ್ಥಳದಲ್ಲಿದ್ದು ಉಸ್ತುವಾರಿ ನಿರ್ವಹಣೆ, ಹಾಗೂ ಪ್ರತಿನಿತ್ಯ ಈ ಕಾಮಗಾರಿಯ ಬಗ್ಗೆ ಸಂಬಂಧಪಟ್ಟ ಶಾಖಾಧಿಕಾರಿಗಳಿಗೆ ವರದಿ ಮಾಡುವುದು.

(13) ಪ್ರವಾಸಿ ಮಂದಿರದ ಸಿಬ್ಬಂದಿ:–

1 ಮೇಟಿ:– ಖಾಲಿ

2 ವಾಟರ್ ಬಾಯ್:– ವೃತ್ತ ಕಛೇರಿಯಲ್ಲಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದಾರೆ.

3 ಸ್ವೀಪರ್:– ಪ್ರವಾಸಿ ಮಂದಿರದ ಆವರಣ, ಕೊಠಡಿ, ಶೌಚಾಲಯ ಶುಚಿತ್ವದ ನಿರ್ವಹಣೆ

3. **ಮೇಲ್ವಿಚಾರಣೆ ಮತ್ತು ಜವಾಬ್ದಾರಿಗಳನ್ನು ಒಳಗೊಂಡಂತೆ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸ ಬೇಕಾದ ಕ್ರಮಗಳು:–**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್:–** ಉಪ ವಿಭಾಗ ವ್ಯಾಪ್ತಿಯಲ್ಲಿ ನಿರ್ವಹಿಸುತ್ತಿರುವ ಕಾಮಗಾರಿಗಳ ಗುಣ ಮಟ್ಟದ ಬಗ್ಗೆ ಆದ್ಯ ಗಮನ ನೀಡಿ ಮೇಲ್ವಿಚಾರಣೆ ನಡೆಸುವುದು ಅಧಿಕಾರ ಪ್ರತ್ಯಾಯೋಜನೆಯ ಅನುಸಾರ ತಾಂತ್ರಿಕ ಹಾಗೂ ಆಡಳಿತಾತ್ಮಕ ವಿಷಯಗಳ ಬಗ್ಗೆ ನಿರ್ಣಯ, ಮತ್ತು ಇತರೆ ವಿಷಯಗಳಲ್ಲಿ ಮೇಲಾಧಿಕಾರಿಗಳಿಗೆ ಯೋಜನೆಗಳ ವರದಿ ಮತ್ತು ಪ್ರಗತಿ ವರದಿಗಳನ್ನು ಸಲ್ಲಿಸುವುದು. ಉಪ ವಿಭಾಗ ಕಛೇರಿಯ ಎಲ್ಲಾ ಜವಾಬ್ದಾರಿಗಳನ್ನು ಹೊಣೆ ಹರಿತು ಕೆಲಸ ನಿರ್ವಹಿಸುವುದು.

**ಸಹಾಯಕ ಇಂಜಿನಿಯರ್:–** ಉಪ ವಿಭಾಗ ವ್ಯಾಪ್ತಿಯ ನಿರ್ಧಿಷ್ಟ ಕಾಮಗಾರಿಗಳ ನಿರ್ಮಾಣ ಮತ್ತು ನಿರ್ವಹಣೆಯ ಮೇಲ್ವಿಚಾರಣೆ ಮತ್ತು ಜವಾಬ್ದಾರಿಯುತವಾಗಿ ಎಲ್ಲಾ ಕೆಲಸಗಳನ್ನು ನಿರ್ವಹಿಸುವುದು.

**ಕಿರಿಯ ಇಂಜಿನಿಯರ್:–** ಉಪ ವಿಭಾಗ ವ್ಯಾಪ್ತಿಯ ನಿರ್ಧಿಷ್ಟ ಕಾಮಗಾರಿಗಳ ನಿರ್ಮಾಣ ಮತ್ತು ನಿರ್ವಹಣೆಯ ಮೇಲ್ವಿಚಾರಣೆ ಮತ್ತು ಜವಾಬ್ದಾರಿಯುತವಾಗಿ ಎಲ್ಲಾ ಕೆಲಸಗಳನ್ನು ನಿರ್ವಹಿಸುವುದು.

**ಡಿ.ಎಂ:–** ಉಪ ವಿಭಾಗ ಕಛೇರಿಗೆ ನಮೂದಿಸಿದಂತೆ ಎಲ್ಲಾ ಮೀಟಿಂಗ್ ಪತ್ರಗಳನ್ನು ತಯಾರಿಸುವುದು. ಪ್ರಗತಿ ವರದಿಗಳನ್ನು ಸಲ್ಲಿಸುವುದು ಮತ್ತು ನಿಗಧಿತ ಸಮಯದೊಳಗೆ ವರದಿಗಳು ರವಾನೆಯಾಗುತ್ತಿರುವ ಬಗ್ಗೆ ಮೇಲ್ವಿಚಾರಣೆ ನಡೆಸುವುದು, ಕಟ್ಟಡಗಳ ಬಾಡಿಗೆ ನಿಗದಿಪಡಿಸುವುದು, ರಸ್ತೆ ಕತ್ತರಿಸಲು ಪರವಾನಿಗೆ ನೀಡುವುದು.

ಪ್ರಥಮ ದರ್ಜೇ ಸಹಾಯಕ:– ಉಪ ವಿಭಾಗ ಕಛೇರಿಯ ಮಾಸಿಕ ಲೆಕ್ಕಗಳನ್ನು ನಿಗಧಿತ ಸಮಯಕ್ಕೆ ಸಲ್ಲಿಸುವುದು ಮತ್ತು ಇತರೆ ಮಾಸಿಕ ವರದಿ ಇತ್ಯಾದಿ ನಿಗಧಿತ ಸಮಯದೊಳಗೆ ವಿಲೇವಾರಿಯಾಗುವಂತೆ ಮೇಲ್ವಿಚಾರಣೆ ಮಾಡುವುದು.

ದ್ವಿತೀಯ ದರ್ಜೇ ಸಹಾಯಕ:– ಉಪ ವಿಭಾಗ ಕಛೇರಿಯ ಮಾಟಿಸಿಕ ವೇತನ ಬಿಲ್ಲುಗಳನ್ನು ನಿಗಧಿತ ಸಮಯಕ್ಕೆ ತಯಾರಿಸಿ ಸಲ್ಲಿಸುವುದು. ಪ್ರಸ್ತಾವನೆಗಳನ್ನು ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ ಶಿಫಾರಸ್ಸಿನೊಂದಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ವರದಿ ಸಲ್ಲಿಸುವುದು.

ಗ್ರೂಪ್ 'ಡಿ' ಕಛೇರಿಯ ಎಲ್ಲಾ ಕೊಠಡಿಗಳ ಶುಚಿತ್ವ ನಿರ್ವಹಣೆ, ಕಡತ ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

4. **ಕಾರ್ಯನಿರ್ವಹಿಸುತ್ತಿರುವವರಿಗೆ ಅನುಸರಿಸುವ ಮಾನದಂಡಗಳು:–**

ಕೆ.ಪಿ.ಡಬ್ಲ್ಯೂಡಿ 'ಡಿ' ಕೋಡ್ ಮತ್ತು ಕೆ.ಪಿ.ಡಬ್ಲ್ಯೂಡಿ.'ಎ' ಕೋಡ್ ಕರ್ನಾಟಕ ಆಕ್ಟ್–2002ರಲ್ಲಿ ನಿಗಧಿಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

5. **ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವ ಉಪಯೋಗಿಸುವ ನಿಯಮಗಳು ನಿಬಂದನೆಗಳು, ಸೂಚನೆಗಳು, ಕೈಪಿಡಿ, ಮತ್ತು ದಾಖಲೆಗಳು:–**

1. ಕರ್ನಾಟಕ ನಾಗರೀಕ ಸೇವಾ ನಿಮಯಗಳು–ನ 1958
2. ಕರ್ನಾಟಕ ಆರ್ಥಿಕ ಸಂಹಿತೆ ನಿಯಮ
3. ಖಜಾನೆ ಸಂಹಿತೆ
4. ಸಾದಿಲ್ವಾರ್ ವೆಚ್ಚದ ಕೈಪಿಡಿ
5. ಕೆ.ಪಿ.ಡಬ್ಲ್ಯೂಡಿ. 'ಎ' ಕೋಡ್
6. ಕೆ.ಪಿ.ಡಬ್ಲ್ಯೂಡಿ. 'ಡಿ' ಕೋಡ್
7. ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು–1966
8. ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ) ನಿಯಮಗಳು–1957
9. ಕಾರ್ಯಾಲಯದ ಕೈಪಿಡಿ

10 ಉಗ್ರಾಣದ ಕೈಪಿಡಿ

11 ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ನಿಯಮಗಳು–(ಆದೇಶ 2–2–01)

12 ಲೋ.ಇ ಮತ್ತು ನೀರಾವರಿ ಇಲಾಖಾ ಅಧಿಕಾರಿ ಪ್ರತಿಯೋಜನೆ ನಿಯಮಗಳು–(ಆದೇಶ15–12–1984)

13 ಸೇವಾ ವಿಷಯಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆ, ಆರ್ಥಿಕ ಇಲಾಖೆ ಲೋ.ಇ ಹೊರಡಿಸಿದ ಆದೇಶ ಸುತ್ತೋಲೆಗಳು

14 ಇಲಾಖಾ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು.

6. **ಇಲಾಖೆಯು ಹೊಂದಿರುವ ದಸ್ತಾವೇಜುಗಳ ಪಟ್ಟಿ**

1. ವಿಷಯ ವಹಿ/ ಸಿಬ್ಬಂದಿ ವಹಿ
2. ನಗದು ಪುಸ್ತಕ ವಹಿ

3. ವಸತಿಗೃಹ ಬಾಡಿಗೆ ವಹಿ
4. ರವಾನೆವಹಿ/ಆಮದುವಹಿ
5. ಸ್ಥಳೀಯ ಬಟವಾಡೆ ಪುಸ್ತಕ
6. ಆಕಸ್ಮಿಕ ರಜಾ ವಹಿ
7. ನೌಕರರ ಸೇವಾ ವಹಿ
8. ಇನ್‌ಕಂಬೆನ್ಸಿ ವಹಿ
9. ವಿಧಾನ ಸಭಾ/ ವಿಧಾನ ಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ರಿಜಿಸ್ಟರ್
10 ನ್ಯಾಯಾಲಯ/ಕೆ.ಎ.ಟಿ ಪ್ರಕರಣಗಳ ಕಡತ
11 ಆಯವ್ಯಯ ಅಂದಾಜು ಪಟ್ಟಿ ಕಡತ
12 ಇಲಾಖಾ ಕಟ್ಟಡ, ರಸ್ತೆ ಮತ್ತು ಸೇತುವೆಗಳ ಅಂಕಿ ಅಂಶದ ರಿಜಿಸ್ಟರ್
13 ನಿವೃತ್ತಿ ವೇತನ ನಿಗಾ ವಹಿ
14 ಕಾರ್ಯನಿರ್ವಹಣಾ (ರಹಸ್ಯ) ವರದಿಗಳ ದಾಖಲು ವಹಿ
15 ಟಿ ಆಂಡ್ ಪಿ ಸ್ವೀಕೃತಿ ವಹಿ.
16 ಟಿ ಆಂಡ್ ಪಿ ನೀಡಿಕೆ ವಹಿ
17 ಉಗ್ರಾಣ ದಾಸ್ತಾನು ವಹಿ
18 ಉಗ್ರಾಣ ನೀಡಿಕೆ ವಹಿ
19 ಎಸ್.ಬಿ.ಆರ್. ವಹಿ
20 ಸ್ಟಾಂಪ್ ವಹಿ.
21 ತುಂಡುಗುತ್ತಿಗೆ ಪ್ರಸ್ತಾವನೆ ವಹಿ
22 ನೌಕರರ ಸೇವಾ ಪುಸ್ತಕಗಳು
23 ಅರ್ಧವಾರ್ಷಿಕ ದಾಸ್ತಾನು ವಹಿ
24 ವಾರ್ಷಿಕ ಟಿ ಆಂಡ್ ಪಿ ವಹಿ

**7. ನೀತಿ ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯವಿಧಾನದ ವಿವರಗಳು.**

ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ಉಪ ವಿಭಾಗದ ಮುಟಖ್ಯಸ್ಥರಾದ ಶ್ರೀ ಬಿ.ಎಸ್ ಬಾಲನ್ ಸ.ಕಾ.ಇಂ ಇವರನ್ನು ಮತ್ತು ಸಹಾಯಕ ಮಾಹಿತಿ ಅಧಿಕಾರಿಯನ್ನಾಗಿ ಶ್ರೀ ಅನಿಲ್ ಕುಮಾರ್ ಸಹಾಯಕ ಇಂಜಿನಿಯರ್ ಇವರನ್ನು ನೇಮಕ ಮಾಡಲಾಗಿದೆ. ಇವರು ಸಂಬಂಧಸಿದ ಸಾರ್ವಜನಿಕ ವ್ಯಕ್ತಿಗಳಿಂದ ದೂರು ಆಕ್ಷೇಪಣೆಗಳನ್ನು ಆಹ್ವಾನಿಸಿ ಪರಿಶೀಲಿಸುತ್ತಾರೆ.

**8 ಸರ್ಕಾರದ ಒಂದು ಭಾಗವಾಗಿ ಅಥವಾ ಸಲಹೆಗಳನ್ನು ಪಡೆಯುವ ಎರಡು ಅಥವಾ ಹೆಚ್ಚು ವ್ಯಾಪ್ತಿಗಳನ್ನೊಳಗೊಂಡ ಮಂಡಳಿ, ಪರಿಷತ್ತು ಸಮಿತಿ ಮತ್ತು ಇತರೆ ಅಂಗಗಳು ಮತ್ತು ಅವುಗಳ ಸಭೆಗಳು ಸಾರ್ವಜನಿಕ ಪ್ರವೇಶಕ್ಕೆ ಮುಕ್ತವಾಗಿದೆಯೇ ಅಥವಾ ಈ ಸಭಾ ನಡವಳಿಗಳು ಸಾರ್ವಜನಿಕರಿಗೆ ದೊರುಕುತ್ತಿವೆಯೇ ಎಂಬ ಬಗ್ಗೆ ವಿವರಣೆ.**

–ಯಾವುದೂ ಇರುವುದಿಲ್ಲ–

**9 ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ 7, ಲೋಕೋಪಯೋಗಿ ಇಲಾಖೆ, ಉಪ ವಿಭಾಗ ವ್ಯಾಪ್ತಿಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರ ದೂರವಾಣಿ ಸಂಖ್ಯೆ ವಿವರ.**

| ಕ್ರ. ಸಂ | ಹೆಸರು ಶ್ರೀಯುತರಾದ | ಹುದ್ದೆ | ಕಛೇರಿ | ದೂರವಾಣಿ ಸಂಖ್ಯೆ | |
|---|---|---|---|---|---|
| | | | | ಮನೆ | ಮೊಬೈಲು |
| 1 | ಬಿ.ಎಸ್.ಬಾಲನ್ | ಸ.ಕಾ.ಇಂ | 272319 | | 9902174074 |
| 2 | ಎಸ್. ಶೇಷಪ್ಪ | ಸ.ಇಂ | – | | 9611522567 |
| 3 | ಹೆಚ್. ರಾಮಚಂದ್ರಪ್ಪ | ಸ.ಇಂ | – | | 9481193201 |
| 4 | ಬಿ. ಓಂಕಾರನಾಯ್ಕ್ | ಕಿ.ಇಂ | – | | 9591523925 |
| 5 | ಶ್ರೀ ಶಂಕರ್‌ನಾಯ್ಕ | ಕಿ.ಇಂ | – | | 9449547303 |
| 6 | ಶ್ರೀ ಮುತ್ತಪ್ಪ | ಪ್ರ.ದ.ಸ | – | | 9480768548 |
| 7 | ಶ್ರೀ ನಾಗೇಂದ್ರಪ್ಪ | ದ್ವಿ.ದ.ಸ | – | | 9449048255 |
| 8 | ಸತೀಶ್ ಬಿ.ಹೆಚ್ | ದ್ವಿ.ದ.ಸ | – | | 9916647780 |
| 9 | ಕೆ.ಶ್ರೀಧರ್ | ಕಿ.ಕೆ.ನಿ | – | | 9241327789 |

‘ಡಿ’ ದರ್ಜೆ ನೌಕರರು

| ಕ್ರ. ಸಂ | ಹೆಸರು ಶ್ರೀಯುತರಾದ | ಹುದ್ದೆ | ಕಛೇರಿ | ದೂರವಾಣಿ ಸಂಖ್ಯೆ | |
|---|---|---|---|---|---|
| | | | | ಮನೆ | ಮೊಬೈಲು |
| 1 | ಟಿ. ಹೆನ್ರಿ | ‘ಡಿ’ ದರ್ಜೆ | 272319 | | 9448921659 |
| 2 | ಪಾಂಡು | ‘ಡಿ’ ದರ್ಜೆ | 272319 | | 9449573606 |

ಪ್ರವಾಸಿ ಮಂದಿರದ ಸಿಬ್ಬಂದಿ

| ಕ್ರ. ಸಂ | ಹೆಸರು ಶ್ರೀಯುತರಾದ | ಹುದ್ದೆ | ಕಛೇರಿ | ದೂರವಾಣಿ ಸಂಖ್ಯೆ | |
|---|---|---|---|---|---|
| | | | | ಮನೆ | ಮೊಬೈಲು |
| 1 | ಗುತ್ಯಮ್ಮ | ಸ್ಲೀಪರ್ | 272319 | | – |
| 2 | ನಾಗರಾಜ ಭಟ್ ಎಸ್.ಬಿ | ವಾಟರ್ ಬಾಯ್ | 272319 | | – |

**10** ನಿಯಮಾನುಸಾರ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು.

| ಕ್ರ. ಸಂ | ಹೆಸರು ಮತ್ತು ಹುದ್ದೆ | ವೇತನ ಶ್ರೇಣಿ | ಮೂಲ ವೇತನ |
|---|---|---|---|
| 1 | ಬಿ.ಎಸ್.ಬಾಲನ್ ಸ.ಕಾ.ಇಂ | 14050–25050 | 16,800 |
| 2 | ಎಸ್. ಶೇಷಪ್ಪ ಸ.ಇಂ | 12000–22650 | 16,000 |
| 3 | ಹೆಚ್. ರಾಮಚಂದ್ರಪ್ಪ ಸ.ಇಂ | 11400–21600 | 13,350 |
| 4 | ಬಿ. ಓಂಕಾರನಾಯ್ಕ್ ಕಿ.ಇಂ | 8825–16000 | 10,250 |
| 5 | ಶ್ರೀ ಶಂಕರನಾಯ್ಕ್ ಕಿ.ಇಂ | 8825–16000 | 10,250 |
| 6 | ಶ್ರೀ ಮುತ್ತಪ್ಪ ಪ್ರ.ದ.ಸ | 8825–16000 | 13,000 |
| 7 | ಶ್ರೀ ನಾಗೇಂದ್ರಪ್ಪ ದ್ವಿ.ದ.ಸ | 6250–12000 | 8,600 |
| 8 | ಸತೀಶ್ ಬಿ.ಹೆಚ್ ದ್ವಿ.ದ.ಸ | 5800–10500 | 6,125 |
| 9 | ಕೆ.ಶ್ರೀಧರ್ ಕಿ.ಕೆ.ನಿ | 7275–13350 | 13,350 |
| 10 | ಟಿ. ಹೆನ್ರಿ ‘ಡಿ’ ದರ್ಜೆ | 5200–8200 | 7800 |
| 11 | ಪಾಂಡು ‘ಡಿ’ ದರ್ಜೆ | 5200–8200 | 6800 |
| | ಪ್ರವಾಸಿ ಮಂದಿರದ ಸಿಬ್ಬಂದಿ | | |
| 12 | ಗುತ್ಯಮ್ಮ ಸ್ಲೀಪರ್ | 4800–7275 | 6800 |
| | ನಿಯೋಜನೆ ಮೇಲೆ ಇರುವ ನೌಕರರು | | |
| 13 | ನಾಗರಾಜ ಭಟ್ ಎಸ್.ಬಿ ವಾಟರ್ ಬಾಯ್ | 4800–7275 | 7450 |

**11. 2011–12ನೇ ಸಾಲಿನ ಆಯವ್ಯಯದಲ್ಲಿ ಸಹಾಯಕ ಕಾರ್ಯಪಾಲಕ ಇಂಜನಿಯರ್, ಲೋಕೋಪಯೋಗಿ ಇಲಾಖೆ, ಉಪ ವಿಭಾಗ ಸೊರಬಕ್ಕೆ ವಿವಿಧ ಯೋಜನಾವಾರು ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ನಿಗಧಿಪಡಿಸಲಾದ ಅನುದಾನದ ವಿವರಗಳು.**

| ಕ್ರ. ಸಂ | ಲೆಕ್ಕ ಶೀರ್ಷಿಕೆ | 2011–12ರ ಅನುದಾನ (ರೂ. ಲಕ್ಷಗಳಲ್ಲಿ |
|---|---|---|
| **1** | **2** | **3** |
| 1 | 3054–13ನೇ ಹಣಕಾಸು | 126.61 |
| 2 | 4059–ಲೋಕೋಪಯೋಗಿ ಇಲಾಖಾ ಕಟ್ಟಡಗಳು | 220–00 |
| 3 | 4059–ಜಿಲ್ಲಾಡಳಿತ | 40–00 |
| 4 | 4059–ಇತರೆ ಇಲಾಖೆ | 450–00 |
| 5 | 4202– ತಾಂತ್ರಿಕ ಶಿಕ್ಷಣ | 260–00 |
| 6 | 4216–ವಸತಿಗೃಹ, ಅಗ್ನಿರಕ್ಷಣೆ ಮತ್ತು ನಿಯಂತ್ರಣ ಇಲಾಖೆ | 60–00 |
| 1 | ನಬಾಡ್ ಅಡಿಯಲ್ಲಿ ಪದವಿಪೂರ್ವ ಕಾಲೇಜು ನಿರ್ಮಾಣ. | 88.36 |
| 2 | ನಂಜುಂಡಪ್ಪ ವರದಿ ಅಡಿಯಲ್ಲಿ | 215.69 |

| ಕ್ರ ಸಂ | ಲೆಕ್ಕ ಶೀರ್ಷಿಕೆ | 2011–12ರ ಅನುದಾನ (ರೂ. ಲಕ್ಷಗಳಲ್ಲಿ |
|---|---|---|
| 1 | 2 | 3 |
| 3 | 5054–ನಬಾರ್ಡ್ ಗ್ರಾಮೀಣ ರಸ್ತೆ ನಿರ್ಮಾಣ (ಟಿಎಸ್‌ಪಿ) | |
| 4 | 5054– ಇತರೆ ರಸ್ತೆ ನಿರ್ಮಾಣ (ಟಿಎಸ್‌ಪಿ) | 31.28 |
| 5 | 5054– (ಯೋಜನೆ) ನಬಾರ್ಡ್ ಗ್ರಾಮೀಣ ರಸ್ತೆ ನಿರ್ಮಾಣ | 292–00 |
| 6 | 5054– (ಯೋಜನೆ) ಕೆಶಿಪ್ ಟಿಎಸ್‌ಪಿ | 65.00 |
| 7 | 2059– (ಯೋಜನೇತರ) ನಿರ್ವಹಣೆ | 12.77 |
| 8 | 2216–ನಿರ್ವಹಣೆ (ಯೋಜನೇತರ) ವಸತಿ | 5.46 |
| 9 | ಸುವರ್ಣ ರಸ್ತೆ ವಿಕಾಸ ಯೋಜನೆಯಡಿ | 78.12 |
| 10 | 5054ನೇ ಕಾಮಗಾರಿ | 275.82 |
| 11 | 5054 ಎಸ್.ಸಿ.ಪಿ. ಓ.ಆರ್.ಎಫ್ | 13.00 |
| 12 | 5054 ಎಸ್.ಸಿ.ಪಿ. ನವೀಕರಣ | 13.13 |
| 13 | 5054 ಎಸ್.ಸಿ.ಪಿ. ನಬಾರ್ಡ್ | 6.80 |
| 14 | 5054 ಟಿ.ಎಸ್.ಪಿ ನವೀಕರಣ | 52.86 |
| 15 | 4059 ಪ್ರೌಢಶಿಕ್ಷಣ | 20.00 |
| 16 | 8443 ಠೇವಣಿ ವಂತಿಕೆ | 89.80 |
| 17 | 5054 ಸೇತುವೆಗಳು | 375 |
| 18 | 5054 ಒಆರ್‌ಎಪ್ ರಸ್ತೆ ನಿರ್ಮಾಣ | 265.00 |

**12. ಸಹಾಯ ಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಅದಕ್ಕಾಗಿ ನಿಗಧಿಗೊಳಿಸಲಾದ ಮೊತ್ತ ಮತ್ತು ಫಲಾನುಭವಿಗಳ ವಿವರ.**

– ಯಾವುದೂ ಇರುವುದಿಲ್ಲ–

**13 ರಿಯಾತಿಗಳನ್ನು ಪಡೆದವರ: ಅಧಿಕಾರ ಪತ್ರಗಳನ್ನು ಮಂಜೂರು ಮಾಡಿದ ಬಗ್ಗೆ ವಿವರಗಳು**

– ಯಾವುದೂ ಇರುವುದಿಲ್ಲ–

**14 ವಿದ್ಯುನ್ಮಾನ ವ್ಯವಸ್ಥೆಯಲ್ಲಿ ಲಭ್ಯವಿರುವ ಮಾಹಿತಿಗಳ ವಿವರ:**

– ಯಾವುದೂ ಇರುವುದಿಲ್ಲ–

**15 ಸಾರ್ವಜನಿಕ ಉಪಯೋಗಕ್ಕಾಗಿ ಪುಸ್ತಕ ಭಂಡಾರ ಅಥವಾ ವಾಚನಾಲಭಯವನ್ನು ನಿರ್ವಹಿಸುತ್ತಿದ್ದಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಅಲ್ಲಿ ದೊರೆಯುವ ಮತ್ತು ಕೆಲಸದ ಅವಧಿಯ ವಿವರಗಳು.**

– ಯಾವುದೂ ಇರುವುದಿಲ್ಲ–

**16 ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಹುದ್ದೆ ಇತ್ಯಾದಿಗಳ ವಿವರಗಳು:–**

ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರ ಅಧಿನಿಯಮ ನಂ.22)ರ ಸೆಕ್ಷನ್ 5(1), 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದಂತೆ ಉಪ ವಿಭಾಗ ಕಛೇರಿಯ ಕೆಳಕಂಡ ಅಧಿಕಾರಿಗಳನ್ನು ಸಾರ್ವಜಜಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕಾತಿ ಮಾಡಲಾಗಿದೆ.

1. ಶ್ರೀ ಬಿ.ಎಸ್ ಬಾಲನ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸೆಕ್ಷನ್ 5(1) ರಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ
2. ಶ್ರಿ ಎಸ್. ಶೇಷಪ್ಪ ಸಹಾಯಕ ಇಂಜಿನಿಯರ್ ಸೆಕ್ಷನ್ 5(2) ರಂತೆ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ.

**17. ನಿಗಧಿಗೊಳಿಸಲಾಗುವ ಇತರೆ ಮಾಹಿತಿಗಳು:–**

ಸರ್ಕಾರದ ಮಾಹಿತಿ ಪಡೆಯುವ ಹಕ್ಕು ಅಧಿನಿಯಮಗಳನ್ನು ರಚಿಸಿದ ನಂತರ ಅದಲ್ಲಿ ಬೇರೆ ಯಾವುದಾದರೂ ಮಾಹಿತಿಗಳನ್ನು ನಿಗಧಿಗೊಳಿಸಿದ್ದಲ್ಲಿ ಅದನ್ನು ಅಳವಡಿಸಲಾಗುವುದು.

**ಬಿ.ಎಸ್. ಬಾಲನ್,**
ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ. ಉಪ ವಿಭಾಗ,ಸೊರಬ.

## ನಮೂನೆ

| | |
|---|---|
| ಸಚಿವಾಲಯ | ಕರ್ನಾಟಕ ಸರ್ಕಾರ |
| ಇಲಾಖೆ | ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ |
| ಸಬ್ ಯುನಿಟ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್<br>ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ<br>ನಂ.7 ಉಪ ವಿಭಾಗ ಸೊರಬ<br>ಶಿವಮೊಗ್ಗ ಜಿಲ್ಲೆ. |
| ಸಾರ್ವಜನಿಕ ಪ್ರಾಧಿಕಾರಿ | ಮುಖ್ಯ ಇಂಜಿನಿಯರ್<br>ಸಂಪರ್ಕ ಮತ್ತು ಕಟ್ಟಡ (ದ)<br>ಲೋ.ಬಂ.ಮತ್ತು ಒ.ಜ.ಸಾ ಇಲಾಖೆ, ಕೆ.ಆರ್. ವೃತ್ತ<br>ಬೆಂಗಳೂರು–560001. |

| ಮೇಲ್ಮನವಿ ಪ್ರಾಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಹಾಯಕ ಸಾರ್ವಜನಿಕ ಮಾಹತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) |
|---|---|---|
| ಶ್ರೀ ಪ್ರಭಾರಕರ ಶೆಟ್ಟಿ<br>ಕಾರ್ಯಪಾಲಕ ಇಂಜಿನಿಯರ್, ಲೋ.ಬಂ.ಮತ್ತು ಒ.ಜ.ಸಾ ಇಲಾಖೆ, ಶಿವಮೊಗ್ಗ ವಿಭಾಗ<br>ಶಿವಮೊಗ್ಗ–5777201 | ಶ್ರೀ ಬಿ.ಎಸ್ ಬಾಲನ್<br>ಸಹಾಯಕ ಕಾರ್ಯಪಾಲಕ ಇಂಜಿನಿಯರ್<br>ಲೋ.ಬಂ.ಮತ್ತು ಒ.ಜ.ಸಾ ಇಲಾಖೆ,<br>ನಂ.7 ಉಪ ವಿಬಾಗ, ಸೊರಬ –577429 | ಶ್ರೀ ಎಸ್. ಶೇಷಪ್ಪ<br>ಸಹಾಯಕ ಇಂಜಿನಿಯರ್ ಲೋ.ಬಂ.ಮತ್ತು ಒ.ಜ.ಸಾ ಇಲಾಖೆ, ನಂ.7 ಉಪ ವಿಬಾಗ,<br>ಸೊರಬ –577429 |
| ಫ್ಯಾಕ್ಸ್:– 08182–274942 | ಫ್ಯಾಕ್ಸ್:– 08184–272319 | ಫ್ಯಾಕ್ಸ್:– 08184–272319 |
| ಕಛೇರಿ ಫೋನ್:–08182–274942 | ಕಛೇರಿ ಫೋನ್:– 08184–272319 | ಕಛೇರಿ ಫೋನ್:– 08184–272319 |
| ಇ–ಮೇಲ್:– eesmg@kpwd.gov.in | ಇ–ಮೇಲ್:– aeesrb@kpwd.gov.in | ಇ–ಮೇಲ್:– aeesrb@kpwd.gov.in |

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ನಂ.7:ಲೋ.ಇ.ಉಪವಿಭಾಗ, ಸೊರಬ.

## FORMAT

| | | |
|---|---|---|
| **Secretariat** | : | Govt of Karnataka |
| **Department** | : | Public Works Department |
| **Sub unit** | : | Assistant Executive Engineer<br>PW, Port & IWT Dept. No. 7 Sub division Soraba-Shimoga Dist. |
| **Public Authority** | : | The Chief Engineer, C&B (South),<br>PW, Port & IWTD, KR Circle, Banagalore-01. |

| Appellate Authority (Name/Address/phone etc.,) | Public Information Officer (Name/Address/phone etc.,) | Assistant Public Information Officer (Name/Address/phone etc.,) |
|---|---|---|
| Sri. Prabhakar Shetty. Executive Engineer, PW, Port & IWTD, Shimoga Division Shimoga-577201 PW, Port & IWTD, | Sri B. S Balan. Assistant Executive Engineer, No. 7 PW, Port & IWTD, Sub-Division Soraba-577429 | Sri. S. Sheshappa Assistant Engineer, No. 7 PW, Port & IWTD, Sub-Division Soraba-577429 |
| Fax: 08182-274942 | Fax:- 08184-272319 | Fax:- 08184-272319 |
| E-mail- eesmg@kpwd.gov.in | E-mail- aeesrb@kpwd.gov.in | E-mail- aeesrb@kpwd.gov.in |

Assistant Executive Engineer,
No. 7 PW, Port & IWTD,
Sub-Division Soraba

PR-1364

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಸಂಖ್ಯೆ. 01/ಅಸೂ/ಅಸಿಪಿ/ಸಂವಿ/2011 ದಿನಾಂಕ: 28-9-2011**

### ಅಧಿಸೂಚನೆ

ಬೆಂಗಳೂರು ನಗರದ ಹೊರವಲಯಗಳಲ್ಲಿ ಹೊಸ ಬಡಾವಣೆಗಳು, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು, ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಇತ್ಯಾದಿಯಾಗಿ ದಿನದಿಂದ ದಿನಕ್ಕೆ ಹೆಚ್ಚುತ್ತಿದ್ದು ಸಹಜವಾಗಿಯೇ ವಾಹನಗಳ ದಟ್ಟಣೆಯು ಅಧಿಕಗೊಂಡು ನಗರದ ಒಳಭಾಗಕ್ಕೆ ಅದರಲ್ಲೂ ಭಾರೀ ಸರಕು ಸಾಗಣೆ ವಾಹನಗಳ ಪ್ರವೇಶ ಮತ್ತು ಸಂಚಾರದಿಂದ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುವ ಜೊತೆಗೆ ಸಂಚಾರ ಸ್ಥಗಿತಕ್ಕೆ ಮತ್ತು ಅಪಘಾತಗಳ ಸಂಭವಿಸುವಿಕೆಗೆ ಕಾರಣವಾಗಿದೆ. ಇದರ ಜೊತೆಗೆ ಹೊರರಾಜ್ಯದ ಸರಕು ಸಾಗಣೆ ಬಾರೀ ವಾಹನಗಳು ನಗರದ ಒಳಭಾಗದ ರಸ್ತೆಗಳಲ್ಲಿ ಹಾದು ಹೋಗುತ್ತಿರುವುದು ಸಹ ಮತ್ತೊಂದು ಕಾರಣವಾಗಿದೆ. ಪ್ರಯುಕ್ತ ಸಾರ್ವಜನಿಕ ಸಂಚಾರ ಹಿತಾಸಕ್ತಿ ಗಮನಿಸಿ ನಗರದ ಒಳಭಾಗದಲ್ಲಿ ಭಾರೀ ಸರಕು ಸಾಗಣೆ ವಾಹನಗಳ ಸಂಚಾರವನ್ನು ಬೆಳಿಗ್ಗೆ ಮತ್ತು ಸಂಜೆ ವಾಹನ ಸಂಚಾರ ದಟ್ಟಣೆ ಸಮಯದಲ್ಲಿ ನಿರ್ಬಂಧಿಸಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ನಗರ ವ್ಯಾಪ್ತಿಯ ಕೆಳಕಂಡ ಗಡೀ ಪ್ರದೇಶದ ಒಳಗೆ ಭಾರೀ ಸರಕು ಸಾಗಣೆ ವಾಹನಗಳ ಪ್ರವೇಶವನ್ನು ಬೆಳಿಗ್ಗೆ 7-30 ಗಂಟೆಯಿಂದ 11-30 ಗಂಟೆವರೆಗೆ ಹಾಗೂ ಸಂಜೆ 04-30 ಗಂಟೆಯಿಂದ ರಾತ್ರಿ 8-30 ಗಂಟೆವರೆಗೆ ನಿರ್ಬಂಧಿಸಿ ಆದೇಶಿಸಿರುತ್ತೇನೆ.

| | | | |
|---|---|---|---|
| 1. | ಹೊಸೂರು ರಸ್ತೆ | – | ನೈಸ್ ರಸ್ತೆ ಜಂಕ್ಷನ್‌ನಿಂದ |
| 2. | ಬೆನ್ನೇರುಘಟ್ಟ ರಸ್ತೆ | – | ನೈಸ್ ರಸ್ತೆ ಜಂಕ್ಷನ್‌ನಿಂದ |
| 3. | ಸರ್ಜಾಪುರ ರಸ್ತೆ | – | ಕೈಕೊಂಡನಹಳ್ಳಿಯಿಂದ |
| 4. | ಹಳೆ ಮದ್ರಾಸ್ ರಸ್ತೆ, ಕೆ.ಆರ್. ಪುರಂ | – | ತಂಬೂಚೆಟ್ಟಿ ಪಾಳ್ಯ ಕ್ರಾಸ್‌ನಿಂದ |
| 5. | ಬಳ್ಳಾರಿ ರಸ್ತೆ | – | ದೇವನಹಳ್ಳಿಯಿಂದ |
| 6. | ಹೆಣ್ಣೂರು ರಸ್ತೆ | – | ಕಣ್ಣೂರು ನಿಂದ |
| 7. | ತುಮಕೂರು ರಸ್ತೆ | – | ಮಾದನಾಯಕನಹಳ್ಳಿಯಿಂದ |
| 8. | ಮಾಗಡಿ ರಸ್ತೆ | – | ತಾವರೇಕೆರೆಯಿಂದ |
| 9. | ಮೈಸೂರು ರಸ್ತೆ | – | ನೈಸ್ ರಸ್ತೆ ಜಂಕ್ಷನ್‌ನಿಂದ |
| 10. | ಕನಕಪುರ ರಸ್ತೆ | – | ತಲಘಟ್ಟಪುರದಿಂದ |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 30-09-2011 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 28-09-2011 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್. 1136

## ನಗರಾಭಿವೃದ್ಧಿ ಇಲಾಖೆ

### ಅಧಿಸೂಚನೆ

**ಸಂಖ್ಯೆ : ನಅಇ 123 ಬೆಂರೂಪ್ರಾ 2011, ದಿನಾಂಕ 12ನೇ ಸೆಪ್ಟೆಂಬರ್ 2011**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4(ಎ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ಪಟ್ಟಣ ಪಂಚಾಯಿತಿ ಎಲ್ಲೆಯ ಕ್ಷೇತ್ರವನ್ನೇ "ಹೊಳಲ್ಕೆರೆ ಸ್ಥಳೀಯ ಯೋಜನಾ ಪ್ರದೇಶ" ವೆಂದು ದಿನಾಂಕ 12-09-2011 ರಿಂದ ಜಾರಿಗೆ ಬರುವಂತೆ ಈ ಮೂಲಕ ಘೋಷಿಸಿದೆ ಹಾಗೂ ಸದರಿ ಕಾಯ್ದೆಯ ಕಲಂ 2(7)(ಬಿ) ರನ್ವಯ ಸದರಿ ಪಟ್ಟಣ ಪಂಚಾಯಿತಿಯೇ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಯೋಜನಾ ಪ್ರಾಧಿಕಾರವಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದೆಂದು ಆದೇಶಿಸಿದೆ.

ಅನುಬಂಧ-1 ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ವಿವರಗಳನ್ನು ಹಾಗೂ ಅನುಬಂಧ-2 ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಸವರಾಜ ಬರದೇಲಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ಇಲಾಖೆ.

## ಅನುಬಂಧ-1

ಹೊಳಲ್ಕೆರೆ ಪಟ್ಟಣ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯೊಳಗೆ ಯೋಜಿಸಿರುವ ಪಟ್ಟಣ/ಗ್ರಾಮಗಳು

| ಕ್ರಮ ಸಂಖ್ಯೆ | ಸ್ಥಳೀಯ ಯೋಜನಾ ಪ್ರದೇಶದಲ್ಲಿ ಬರುವ ಪಟ್ಟಣ/ ಗ್ರಾಮಗಳು | ಜನಸಂಖ್ಯೆ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | ಸೇರಿರುವ ಪ್ರದೇಶದ ವಿವರ |
|---|---|---|---|---|
| 01 | ಹೊಳಲ್ಕೆರೆ | 14.574 | 2640.10 | ಹೊಳಲ್ಕೆರೆ ಗ್ರಾಮದ ಠಾಣಾ ಮತ್ತು ಹೊಳಲ್ಕೆರೆ ಗ್ರಾಮದ ಸ.ನಂ. 1 ರಿಂದ 589 ರವರೆಗೆ ಪೂರ್ಣ ಸರ್ವೆ ನಂಬರ್‌ಗಳು ಸೇರಿರುತ್ತವೆ. |
| | ಒಟ್ಟು | 14,574 | 2640.10 | |

**ಬಸವರಾಜ ಬರದೇಲಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ಇಲಾಖೆ.

## ಅನುಬಂಧ-2

## ಹೊಳಲ್ಕೆರೆ ಪಟ್ಟಣದ ಉದ್ದೇಶಿತ ಸ್ಥಳೀಯ ಯೋಜನಾ ಪ್ರದೇಶದ ಸಂಕ್ಷಿಪ್ತ ಸರಹದ್ದಿನ ವಿವರಣೆ

**ಪೂರ್ವ:-**

ಹೊಳಲ್ಕೆರೆ ಗ್ರಾಮದ ಸ.ನಂ. 214ರ ಉತ್ತರ ಬಿಂದುವಿನಿಂದ ಪ್ರಾರಂಭಗೊಂಡು ಅಲ್ಲಿಂದ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸ.ನಂ. 214 ಮತ್ತು ಸ.ನಂ. 215, 81 ನ್ನು ಒಳಗೊಂಡು ಸ.ನಂ. 581ರ ಪೂರ್ವ-ದಕ್ಷಿಣದ ಬಿಂದುವನ್ನು ಸಂಧಿಸಿ, ಅಲ್ಲಿಂದ ಪೂರ್ವದ ಕಡೆ ತಿರುಗಿ ಪೂರ್ವಾಭಿಮುಖವಾಗಿ ಚಲಿಸುತ್ತಾ ಸ.ನಂ. 513, 514, 515 ನ್ನು ಒಳಗೊಂಡು ಸ.ನಂ. 217ರ ಉತ್ತರ ಪೂರ್ವ ಬಿಂದುವನ್ನು ಸಂದಿಸಿ, ಅಲ್ಲಿಂದ ದಕ್ಷಿಣಕ್ಕೆ ತಿರುಗಿ ದಕ್ಷಿಣಾಭಿಮುಖವಾಗಿ ಚಲಿಸುತ್ತಾ, ಶಿವಮೊಗ್ಗ-ಚಿತ್ರದುರ್ಗ ರಾಷ್ಟ್ರೀಯ ಹೆದ್ದಾರಿ-13 ನ್ನು ದಾಟಿ ಸ.ನಂ. 218ರ ಪೂರ್ವ ದಕ್ಷಿಣ ಬಿಂದುವನ್ನು ಸಂದಿಸಿ ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಸ.ನಂ. 218 ಮತ್ತು ಸ.ನಂ. 217 ಅನ್ನು ಒಳಗೊಂಡು ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸ.ನಂ. 451, 450, 448, 220, 221 ನ್ನು ಒಳಗೊಂಡು ಸ.ನಂ. 223ರ ಉತ್ತರ-ಪೂರ್ವ ಬಿಂದುವನ್ನು ಸಂಧಿಸಿ ಅಲ್ಲಿಂದ ದಕ್ಷಿಣದ ಕಡೆ ತಿರುಗಿ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸ.ನಂ. 223 ಮತ್ತು ಸ.ನಂ. 225 ನ್ನು ಒಳಗೊಂಡು ಪುನಃ ಅಲ್ಲಿ ಶಿವಮೊಗ್ಗ-ಚಿತ್ರದುರ್ಗ ರಾಷ್ಟ್ರೀಯ ಹೆದ್ದಾರಿ-13 ನ್ನು ದಾಟಿ ಅಲ್ಲಿಂದ ಸ.ನಂ. 316, 317, 318, 324, 325, 333 ಮತ್ತು ಸ.ನಂ. 334 ನ್ನು ಒಳಗೊಂಡು ಸ.ನಂ. 334ರ ಪೂರ್ವ-ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಪೂರ್ವ-ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸ.ನಂ. 336 ಮತ್ತು ಸ.ನಂ. 337 ನ್ನು ಒಳಗೊಂಡು ಸ.ನಂ. 337ರ ಪೂರ್ವ-ದಕ್ಷಿಣ ಬಿಂದುವನ್ನು ಬಂದು ಸೇರುತ್ತದೆ.

**ದಕ್ಷಿಣ:-**

ಹೊಳಲ್ಕೆರೆ ಗ್ರಾಮದ ಸ.ನಂ. 337ರ ಪೂರ್ವ-ದಕ್ಷಿಣ ಬಿಂದುವಿನಿಂದ ಪ್ರಾರಂಭಗೊಂಡು, ಪಶ್ಚಿಮಕ್ಕೆ ತಿರುಗಿ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸ.ನಂ. 337 ನ್ನು ಒಳಗೊಂಡು ಸದರಿ ಸ.ನಂ.337ರ ಪಶ್ಚಿಮ-ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಉತ್ತರಕ್ಕೆ ತಿರುಗಿ, ಉತ್ತರಾಭಿಮುಖವಾಗಿ ಚಲಿಸುತ್ತಾ, ಸ.ನಂ.337 ಮತ್ತು ಸ.ನಂ.336 ನ್ನು ಒಳಗೊಂಡು ಸ.ನಂ. 463ರ ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸ.ನಂ. 338 ನ್ನು ಒಳಗೊಂಡು ಸದರಿ ಸ.ನಂ. 338ರ ಪಶ್ಚಿಮ-ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಉತ್ತರದ ಕಡೆಗೆ ತಿರುಗಿ ಉತ್ತರಾಭಿಮುಖವಾಗಿ ಚಲಿಸುತ್ತಾ ಸ.ನಂ. 338, 429, 428, 427, 426, 425, 424, 423, 422 ನ್ನು ಒಳಗೊಂಡು ಸ.ನಂ.422ರ ಉತ್ತರ-ಪಶ್ಚಿಮ ಬಿಂದುವನ್ನು ಸಂಧಿಸಿ ಅಲ್ಲಿಂದ ಪಶ್ಚಿಮಕ್ಕೆ ತಿರುಗಿ, ಪಶ್ಚಿಮಾಭಿಮುಖವಾಗಿ ಚಲಿಸುತ್ತಾ, ಸ.ನಂ. 339 ನ್ನು ಒಳಗೊಂಡು ಹೊಳಲ್ಕೆರೆ-ಹೊಸದುರ್ಗ ರಾಜ್ಯ ಹೆದ್ದಾರಿಯನ್ನು ದಾಟಿ ಸ.ನಂ. 377, 420, 385 ಮತ್ತು 386 ನ್ನು ಒಳಗೊಂಡು ಸ.ನಂ.386 ಪಶ್ಚಿಮ-ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ದಕ್ಷಿಣಕ್ಕೆ ತಿರುಗಿ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸ.ನಂ. 32, 494, 495 ಮತ್ತು ಸ.ನಂ. 33 ನ್ನು ಒಳಗೊಂಡು ಸ.ನಂ.33 ರ ಪೂರ್ವ-ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಪಶ್ಚಿಮ-ದಕ್ಷಿಣ ಬಿಂದುವನ್ನು ಸಂಧಿಸಿ ಅಲ್ಲಿಂದ ಉತ್ತರಕ್ಕೆ ತಿರುಗಿ, ಸ್ವಲ್ಪ ದೂರ ಉತ್ತರಾಭಿಮುಖವಾಗಿ ಚಲಿಸಿ,

ಸದರಿ ಸ.ನಂ. 33ರ ಉತ್ತರ–ಪೂರ್ವ ಬಿಂದುವನ್ನು ಸಂಧಿಸಿ ಅಲ್ಲಿಂದ ಪುನಃ ಪಶ್ಚಿಮಕ್ಕೆ ತಿರುಗಿ ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸ.ನಂ. 559, 34, 496 ಮತ್ತು ಸ.ನಂ. 436 ನ್ನು ಒಳಗೊಂಡು ಸ.ನಂ. 436ರ ಪಶ್ಚಿಮ–ದಕ್ಷಿಣ ಬಿಂದುವನ್ನು ಬಂದು ಸೇರುತ್ತದೆ.

**ಪಶ್ಚಿಮ:–**

ಹೊಳಲ್ಕೆರೆ ಗ್ರಾಮದ ಸ.ನಂ. 436 ರ ದಕ್ಷಿಣ–ಪಶ್ಚಿಮ ಬಿಂದುವಿನಿಂದ ಪ್ರಾರಂಭಗೊಂಡು ಉತ್ತರಾಭಿಮುಖವಾಗಿ ಚಲಿಸುತ್ತಾ ಸ.ನಂ. 436, 437, 438, 37, 508, 509, 506, 503, 502, 48, 53, 54, 55 ನ್ನು ಒಳಗೊಂಡು ಶಿವಮೊಗ್ಗ–ಚಿತ್ರದುರ್ಗ ರಾಷ್ಟ್ರೀಯ ಹೆದ್ದಾರಿ–13 ನ್ನು ದಾಟಿ, ನಂತರ ಸ.ನಂ. 65 ಮತ್ತು ಸ.ನಂ. 66 ನ್ನು ಒಳಗೊಂಡು ಸ.ನಂ. 66ರ ಉತ್ತರ–ಪಶ್ಚಿಮ ಬಿಂದುವನ್ನು ಸಂಧಿಸಿ ಅಲ್ಲಿಂದ ಪಶ್ಚಿಮಕ್ಕೆ ತಿರುಗಿ, ಪಶ್ಚಿಮಾಭಿಮುಖವಾಗಿ ಚಲಿಸುತ್ತಾ ಸ.ನಂ. 98 ಮತ್ತು ಸ.ನಂ. 99 ನ್ನು ಒಳಗೊಂಡು ಸ.ನಂ. 99ರ ಪಶ್ಚಿಮ–ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಉತ್ತರಕ್ಕೆ ತಿರುಗಿ, ಉತ್ತರಾಭಿಮುಖವಾಗಿ ಚಲಿಸುತ್ತಾ ಸ.ನಂ. 99, 100 ಮತ್ತು ಸ.ನಂ. 104 ನ್ನು ಒಳಗೊಂಡು ಸದರಿ ಸ.ನಂ. 104ರ ಉತ್ತರ–ಪಶ್ಚಿಮ ಬಿಂದುವನ್ನು ಸಂಧಿಸಿ, ಅಲ್ಲಿಂದ ಪೂರ್ವದ ಕಡೆ ತಿರುಗಿ, ಪೂರ್ವಾಭಿಮುಖವಾಗಿ ಚಲಿಸುತ್ತಾ, ಸ.ನಂ. 104 ಮತ್ತು ಸರ್ವೆ ನಂ. 103 ನ್ನು ಒಳಗೊಂಡು ಸರ್ವೆ ನಂ. 103ರ ಉತ್ತರ–ಪೂರ್ವ ಬಿಂದುವನ್ನು ಸಂಧಿಸಿ ಅಲ್ಲಿಂದ ಉತ್ತರಕ್ಕೆ ತಿರುಗಿ ಸ್ವಲ್ಪದೂರ ಉತ್ತರಾಭಿಮುಖವಾಗಿ ಚಲಿಸುತ್ತಾ, ಸ.ನಂ. 105ರ ಉತ್ತರ–ಪಶ್ಚಿಮ ಬಿಂದುವನ್ನು ಸಂಧಿಸಿ, ಅಲ್ಲಿಂದ ಪೂರ್ವಕ್ಕೆ ತಿರುಗಿ, ಪೂರ್ವಾಭಿಮುಖವಾಗಿ ಚಲಿಸುತ್ತಾ ಸ.ನಂ. 105 ಮತ್ತು ಸ.ನಂ. 106 ನ್ನು ಒಳಗೊಂಡು, ಸ.ನಂ. 156ರ ಪಶ್ಚಿಮ–ದಕ್ಷಿಣ ಬಿಂದುವನ್ನು ಸಂಧಿಸಿ, ಅಲ್ಲಿಂದ ಉತ್ತರದ ಕಡೆ ತಿರುಗಿ, ಉತ್ತರಾಭಿಮುಖವಾಗಿ ಚಲಿಸುತ್ತಾ, ಸ.ನಂ. 156, 157, 162, 163, 164 ಮತ್ತು ಸ.ನಂ. 165 ನ್ನು ಒಳಗೊಂಡು ಸ.ನಂ. 165ರ ಉತ್ತರ–ಪಶ್ಚಿಮ ಬಿಂದುವಿಗೆ ಬಂದು ಸೇರುತ್ತದೆ.

**ಉತ್ತರ:–**

ಹೊಳಲ್ಕೆರೆ ಗ್ರಾಮದ ಸ.ನಂ. 165ರ ಉತ್ತರ–ಪಶ್ಚಿಮ ಬಿಂದುವಿನಿಂದ ಪ್ರಾರಂಭಗೊಂಡು, ಪೂರ್ವಾಭಿಮುಖವಾಗಿ ಚಲಿಸುತ್ತಾ, ಸ.ನಂ. 165 ಮತ್ತು ಸ.ನಂ. 166 ನ್ನು ಒಳಗೊಂಡು, ಸ.ನಂ. 166ರ ಉತ್ತರ–ಪೂರ್ವ ಬಿಂದುವನ್ನು ಸಂಧಿಸಿ, ಅಲ್ಲಿಂದ ದಕ್ಷಿಣಕ್ಕೆ ತಿರುಗಿ, ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸ.ನಂ. 166 ಮತ್ತು ಸ.ನಂ. 164 ನ್ನು ಒಳಗೊಂಡು ಸದರಿ ಸ.ನಂ. 164 ದಕ್ಷಿಣ ಪೂರ್ವ ಬಿಂದುವನ್ನು ಸಂಧಿಸಿ, ಅಲ್ಲಿಂದ ಪೂರ್ವದ ಕಡೆ ತಿರುಗಿ, ಪೂರ್ವಾಭಿಮುಖವಾಗಿ ಚಲಿಸುತ್ತಾ ಸ.ನಂ. 169, 170, 176, 177, 181, 182, 183, 205 ಮತ್ತು ಸ.ನಂ. 206 ನ್ನು ಒಳಗೊಂಡು ಸ.ನಂ. 206ರ ಉತ್ತರ–ಪೂರ್ವ ಬಿಂದುವನ್ನು ಸಂಧಿಸಿ ಅಲ್ಲಿಂದ ಉತ್ತರಕ್ಕೆ ತಿರುಗಿ, ಸ್ವಲ್ಪದೂರ ಉತ್ತರಾಭಿಮುಖವಾಗಿ ಚಲಿಸುತ್ತಾ ಸ.ನಂ. 207 ಮತ್ತು ಸ.ನಂ. 208 ನ್ನು ಒಳಗೊಂಡು ಸ.ನಂ. 208ರ ಉತ್ತರ–ಪಶ್ಚಿಮ ಬಿಂದುವನ್ನು ಸಂಧಿಸಿ, ಅಲ್ಲಿಂದ ಪೂರ್ವದ ಕಡೆ ತಿರುಗಿ, ಪೂರ್ವಾಭಿಮುಖವಾಗಿ ಚಲಿಸುತ್ತಾ, ಸ.ನಂ. 208, 212 ಮತ್ತು ಸ.ನಂ. 214 ನ್ನು ಒಳಗೊಂಡು ಸ.ನಂ. 214ರ ಉತ್ತರ ಬಿಂದುವನ್ನು ಬಂದು ಸೇರುತ್ತದೆ.

**ಬಸವರಾಜ ಬರದೇಲಿ,**

ಪಿ.ಆರ್.987

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ಇಲಾಖೆ.

## COMMERCIAL TAXES DEPARTMENT

**PROCEEDINGS OF THE COMMISSIONER OF COMMERCIAL TAXES,(KARNATAKA), BANGALORE – CLARIFICATION UNDER SECTION 59(4) OFTHE KARNATAKA VALUE ADDED TAX ACT, 2003**

**Sub :** KVAT Act, 2003 – Clarification under Section 59 (4) regarding rate of tax applicable on Steam generators – reg.

**Ref :** Application dt. 16-06-2011 of M/s Alba Equipments, Kamakshipalya, Bangalore-560079. TIN : 29780077571.

In the application cited above, M/s Alba Equipments, No.S-5, Pete Chennappa Industrial Estate, Kamakshipalya, Bangalore-560079 has sought clarification regarding the rate of tax applicable on Steam generators.

2.Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3.Hence the following clarification is issued.

**CLARIFICATION NO. CLR.CR. 70/11-12, DATED 29 - 11 - 2011**

It is clarified that "Steam generators' are liable to tax at 5% as per Sl. No. 36, of the table to the Notification No. FD 316 CSL 2005 (I) dated 05-08-2005.

**Pradeep Singh Kharola**

PR-1310

Commissioner of Commercial Taxes (Karnataka), Bangalore.

## COMMERCIAL TAXES DEPARTMENT

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE – CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub :** KVAT Act, 2003 – Clarification under Section 59 (4) regarding rate of tax applicable on Steam generators – reg.

**Ref :** Application dt. 16-06-2011 of M/s Solwin Machinery Equipments, Kamakshipalya, Bangalore-560079. Tin : 29570848400

In the application cited above, M/s Solwin Machinery Equipments, No. 65/2, Satish Building Road, 3rd 'B' Main, Kaveripura, G.K. Industrial Estate, Kamakshipalya, Bangalore-560079. has sought clarification regarding the rate of tax applicable on Steam generators.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR. 71/11-12, DATED 29 - 11 - 2011**

It is clarified that "Steam generators' are liable to tax at 5% as per Sl. No. 36, of the table to the Notification No. FD 316 CSL 2005 (I) dated 05-08-2005.

**Pradeep Singh Kharola**
Commissioner of Commercial Taxes (Karnataka), Bangalore.

PR-1311

## IN THE COURT OF COMMISSIONER FOR WORKMEN`S COMPENSATION BIDAR.

**NO. LOB/WCA/Cr-F 58/2011,**

| **Applicants:-** | | **Respondents:-** |
|---|---|---|
| 1. Ambu W/o Late Papanna, Kasale, age : 23, yrs : Occup: Household, R/O Gour Chincholi, Tq. Balki, dist. Bidar and 5 others | **V/S** | 1. Md. Sadaq Ali S/o Mahtab sab. age : major, Occup: Business, R/o Gour Chincholi, Tq. Bhalki. Dist. Bidar.<br>2. The Branch Manager, National Insurance Co. Ltd., Bidar. |

## PROCLAIMATION

Sri/Smt : Ambu W/o. F/o. S/o. Late Papanna Kasle R/o Gour Chincholi, Tq. Bhalki, Dist Bidar. Have/has filed application in this court claiming compensation stating that Late Papanna Kasle was working as Driver, under the Respondent No I he met with an accident, arising out of and during the course of employment as a result he died on : 02-09-2011.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the court will proceeded further in the matter.

**COMMISSIONER FOR WORKMEN`S COMPENSATION, BIDAR**

**P.R. 1312**